MOST USEFUL AND COMPLETE
GUIDE TO

B. A. PART II MAJOR KANNADA TEXT

# ವಿರಾಟ ಪರ್ವ ಸಂಗ್ರಹ



S. S. C. INSTITUTE, GADAG.

# MOST USEFUL AND COMPLETE GUIDE TO

B. A. PART II MAJOR KANNADA TEXT.

# ವಿರಾಟ ಪರ್ವ ಸಂಗ್ರಹ

By :
ಪ್ರೊ. ಕುಲಕರ್ಣಿ, ಎಂ. ಎ.

ಬೆಲೆ : ೨-೦೦

S. S. C. INSTITUTE, GADAG.

# ವಿರಾಟ ಪರ್ವ ಸಂಗ್ರಹ.

## (ಕನ್ನಡ ಕುಮಾರವ್ಯಾಸ ಭಾರತ)

ಕವಿಪರಿಚಯ:—ಭಕ್ತಕವಿಗಳಲ್ಲಿ ಕುಮಾರವ್ಯಾಸನು ಅಗ್ರಗಣ್ಯನೆಂದು ಹೇಳಿದರೆ ತಪ್ಪಲ್ಲ. ಆತನ ಭಕ್ತಿಯ ಮಹಾಕಾವ್ಯವೆನಿಸಿದ 'ಕರ್ಣಾಟ ಭಾರತ ಕಥಾಮಂಜರಿ ಸತ್ವದಲ್ಲಿಯೂ ಶ್ರೇಷ್ಠ ಕೃತಿಯೆನಿಸಿಕೊಂಡಿದೆ. ಲೋಕ ಪ್ರೀಯವಾದ ಭಾಮಿನೀ ಷಟ್ಪದಿಯಲ್ಲಿ, ಕುಮಾರವ್ಯಾಸನು ವ್ಯಾಸ ಮಹಾಭಾರತದ ದಶಪರ್ವಗಳನ್ನು ಆಯ್ದುಕೊಂಡು' ಗದುಗಿನ ಭಾರತವನ್ನು ರಚಿಸಿ ಕನ್ನಡ ಸರಸ್ವತಿಗೆ ಕಾಣಿಕೆಯಾಗಿ ನೀಡಿದ್ದಾನೆ.

ಮಹಾಕವಿ ನಾರಾಯಣಪ್ಪನ ಕಾಲ ಮತಗಳ ವಿಚಾರದಲ್ಲಿ ಭಿನ್ನಾಭಿಪ್ರಾಯವಿದ್ದು; ವಿಪುಲವಾದ ಚರ್ಚೆಗಳು ನಡೆದಿವೆ. ಆದರೆ ಆ ಚರ್ಚೆಗಳನ್ನು ಕೈಬಿಟ್ಟು ಒಂದು ಸರ್ವ ಸಮ್ಮತವಾದ ವಿಚಾರವನ್ನು ಸಂಗ್ರಹಿಸಿ ಇಲ್ಲಿ ಹೇಳಬಹುದು.

೧) ಕುಮಾರವ್ಯಾಸನ ಕಾಲ ಕ್ರಿಶ.೧೫ನೆ ಶತಮಾನದ ಪೂರ್ವಾರ್ಧವೆಂದು ಶ್ರೀಮಾನ್ ಗೋವಿಂದ ಪೈಯವರು ನಿರ್ಧರಿಸಿದ್ದಾರೆ. ಅವರು ಕೊಡುವ ಕಾರಣಗಳು ಇಷ್ಟೇಯೆಂದು ಹೇಳಬಹುದು.

ಗದುಗಿನ ನಾರಾಯಣ ಸ್ವಾಮಿಯ ದೇವಸ್ಥಾನದಲ್ಲಿರುವ ಕ್ರಿಶ.೧೫೩೯ರ ಒಂದು ಶಾಸನದಲ್ಲಿ ಕುಮಾರವ್ಯಾಸವೆಂಬ ಹೆಸರನ್ನು ಸ್ಪಷ್ಟವಾಗಿ ತಿಳಿಸಿರುವದರಿಂದಲೂ, ಕುಮಾರವ್ಯಾಸನ ರಚಿಸದೆ ಬಿಟ್ಟ ಇತರ ಪರ್ವಗಳನ್ನು ಕೃಷ್ಣದೇವರಾಯನ (ಕ್ರಿಶ ೧೫೦೯)ನ ಅಪ್ಪಣೆಯ ಮೇರೆಗೆ ತಿಮ್ಮಣ್ಣ ಕವಿ ರಚಿಸಿದನೆಂದು, ತಿಮ್ಮಣ್ಣ ಕವಿ ತನ್ನ ಶಾಂತಿಪರ್ವದಲ್ಲಿ ಹೇಳಿಕೊಂಡಿರುವದರಿಂದಲೂ ನಾರಾಯಣಪ್ಪನು ಕ್ರಿಶ ೧೫೦೦ಕ್ಕೂ ಹಿಂದಿನವನೆಂದು ಸ್ಪಷ್ಟವಾಗುತ್ತದೆ.

೨) ಕುಮಾರವ್ಯಾಸನು ತನ್ನ ಕಾವ್ಯದಲ್ಲಿ ದ್ರೌಪದೀ ಸ್ವಯಂವರಕ್ಕೆ ಮಹೇಶ್ವರ ಜೈನ ಬೈರವ ಬುದ್ಧಿ ಲಿಂಗಗಳು ಬಂದಿದ್ದರೆಂದು ಹೇಳಿದ್ದ ಮೂಲಕವಾಗಿ ಈ ಕವಿ ಕ್ರಿಶ ೧೨೦೦ರ ಈಚಿನವನಾಗಿರಬೇಕು.

೩) ನಾರಾಯಣಪ್ಪನು ತನ್ನ ಗದುಗಿನ ಭಾರತದಲ್ಲಿ ಮರಾಠಿ ಭಾಷೆಯ ಅನೇಕ ಪದಗಳ ಬಳಕೆ ಮಾಡಿದ್ದಾನೆ. ಈ ಎಲ್ಲ ಮರಾಠಿ ಭಾಷೆಯ ಪದಗಳು ಕ್ರಿಶ ೧೨೯೦ರಲ್ಲಿ ರಚಿತವಾದ 'ಜ್ಞಾನೇಶ್ವರಿ'ಯೆಂಬ ಗ್ರಂಥದಲ್ಲಿ ದೊರಕುವದರಿಂದ ನಾರಾಯಣಪ್ಪನು ಕ್ರಿ ಶ ೧೨೯೦ರ ಸುಮಾರಿನವನಾಗಿರಬೇಕು.

೪) ಕ್ರಿ ಶ ೧೨೧೩ರಲ್ಲಿ ಗದಗ ಪ್ರಾಂತವು ಹೊಯ್ಸಳರ ಕೈತಪ್ಪಿ ಸೇವುಣರ ವಶವಾಯಿತು. ಕವಿ ತನ್ನ ಕಾವ್ಯದಲ್ಲಿ ವಿಪುಲ ಮರಾಠಿ ಪದಗಳನ್ನು ಬಳಿಸಿದುದರಿಂದ ಆತನು ೧೨೧೩ರ ಈಚೆಗೆ ಕಾವ್ಯ ಬರೆದಿರಬೇಕು. ಆದರೆ ತಾನು ಸೇವುಣರ ರಾಜ್ಯದಲ್ಲಿದ್ದರೂ ತನ್ನ ಕಾವ್ಯದಲ್ಲಿ ಹೊಯ್ಸಳರಿಗೆ ಗೌರವ ತೋರಿಸುವದರಿಂದ ಆತನ ನಾಡು ಹೊಯ್ಸಳರ ಕೈತಪ್ಪಿ ಇನ್ನೂ ಬಹಳ ಕಾಲವಾಗಿದ್ದಿರಲಾರದು. ಆದ್ದರಿಂದ ಕುಮಾರವ್ಯಾಸನ ಕಾಲವನ್ನು ಕ್ರಿಶ ೧೨೩೦-೩೫ರೊಳಿದ್ದಿರಬೇಕು ಯೆಂದು ಹೇಳಬಹುದು.

ಮಹಾಕವಿ ಕುಮಾರವ್ಯಾಸ ನಮ್ಮವನೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಆದರೆ ಇವನ ಮತದ ವಿಚಾರದಲ್ಲಿಯೂ ಸಹಿತ ಭಿನ್ನಾಭಿಪ್ರಾಯಗಳುಂಟು. ನಾರಾಯಣಪ್ಪನು ವೀರಶೈವನೆಂದೂ ಬ್ರಾಹ್ಮಣನೆಂದೂ. ಬ್ರಾಹ್ಮಣರಲ್ಲಿ ಸ್ಮಾರ್ತನೆಂದೂ,ವೈಷ್ಣವನೆಂದೂ, ಭಾಗವತ ಪಂಥದವನೆಂದೂ ವಾದವಿರುವದುಂಟು. ಸತ್ಯವಾದುದನ್ನು ಕಂಡು ಹಿಡಿಯು ಬೇಕೆಂಬುದು ಸಾಧುವಾದರೂ ಅಂಧಶ್ರದ್ಧೆಯಿಂದ ಹುರಿಗೂಂಡು ವಾದಕ್ಕೆ ಇಳಿಯುವದು ಉಚಿತವಾದುದಲ್ಲ. ನಾರಾಯಣಪ್ಪ ಮಹಾಕವಿ, ನಮ್ಮ ನಾಡಿನವನೆಂದು ಕೇವಲ ಹೆಮ್ಮೆಪಡುವದು ಸಾಲದು. ಇವನ ಕಾವ್ಯದಲ್ಲಿ ಸರ್ವಧರ್ಮಗಳು ಸಮನ್ವಯಗೊಂಡಿವೆ, ವಿಷ್ಣುವನ್ನು ಅನನ್ಯಭಕ್ತಿಯಿಂದ ಸ್ತುತಿಸುತ್ತಾನೆ, ಇದಲ್ಲದೇ ಇವನು ಶಿವನನ್ನು ಸಹ ಸ್ತುತಿಸುತ್ತಾನೆ. ಇವನ ಕಾವ್ಯದಲ್ಲಿ ಭಕ್ತಿ, ಕರ್ಮ ಮತ್ತು ಜ್ಞಾನಮಾರ್ಗವಿದೆ. ಇಷ್ಟೇ ಅಲ್ಲದೇ ಇದರಲ್ಲಿ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತವಿದೆ. ಆದರೆ ಆ ಕವಿಯನ್ನು ನಮ್ಮ ಮಟ್ಟಕ್ಕೆ ಎಳೆದುಕೊಂಡು, ಇತ್ಯರ್ಥಮಾಡುವದು ಸಾಹಸದ ಕೆಲಸ. ಹೆಸರಿನ ಮೇಲೆ ಈತನನ್ನು ಬ್ರಾಹ್ಮಣನೆಂದು ಹೇಳಲು ಸಾಧಕವಾಗಿದೆ, ಸಕಲ ಶಾಸ್ತ್ರಗಳನ್ನು ಅಭ್ಯಾಸ ಮಾಡಿಕೊಂಡಿದ್ದ ಬಹು ದೊಡ್ಡ ವ್ಯಕ್ತಿ ಈತನೆಂದು ಹೇಳಬಹುದು.

ಕವಿಯು ಹುಟ್ಟಿದೂರು ಕೋಳಿವಾಡವೆಂಬ ಚಿಕ್ಕಗ್ರಾಮ. ಈ ಊರು ಆತನ ವಂಶದವರಿಗೆ ಉಂಬಳಿಯಾಗಿ ಬಂದಿತ್ತೆಂದು ಹೇಳುತ್ತಾರೆ. ಇವನು ಗದುಗಿನ ನಾರಾಯಣಸ್ವಾಮಿಯ ಅಂಕಿತದಲ್ಲಿ ತನ್ನ ಗ್ರಂಥವಾದ ಗದುಗಿನ ಭಾರತವನ್ನು ಬರೆದಿದ್ದಾನೆ. ಸಂಸ್ಕೃತದಲ್ಲಿ ರಚಿಸಲ್ಪಟ್ಟ ವ್ಯಾಸರ ಮಹಾಭಾರತದ ಮೊದಲನೆಯ ಹತ್ತು ಪರ್ವಗಳನ್ನು ಮಾತ್ರ ಕನ್ನಡಿಸಿದ್ದಾನೆ. ಈತನು ಕೇವಲ 'ಕರ್ನಾಟ ಭಾರತ ಕಥಾಮಂಜರಿ' ಕಾವ್ಯವನ್ನು ಮಾತ್ರ ಬರೆಯಲಿಲ್ಲ ಇದಲ್ಲದೇ 'ಐರಾವತ'ವೆಂಬ ಇನ್ನೊಂದು ಕಾವ್ಯವನ್ನು ಬರೆದಿರುವನೆಂದು ಕವಿಚರಿತ್ರೆಗಾರ ಆರ್ ನರಸಿಂಹಾಚಾರ್ಯರು ಅಭಿಪ್ರಾಯಪಡುತ್ತಾರೆ.

ಮಹಾಕವಿ ಕುಮಾರವ್ಯಾಸನನ್ನು ಆತನ ತರುವಾಯದ ಅನೇಕ ಕವಿಗಳು ಇವನನ್ನು ಬಾಯ್ತುಂಬ ಹೊಗಳಿದ್ದಾರೆ. ಕನ್ನಡನಾಡಿನ ಅತ್ಯಂತ ಜನಪ್ರಿಯವಾದ ಕಾವ್ಯಗಳಲ್ಲಿಕುಮಾವ್ಯಾಸರವಿರಚಿತ'ಕರ್ಣಾಟ ಭಾರತ ಕಥಾಮಂಜರಿ' ಒಂದುಯೆಂದು ಹೇಳಬಹುದು.

## ೨. ಕಾವ್ಯದ ಮೂಲ ಮತ್ತು ಹಿರಿಮೆ.

ಕುಮಾರವ್ಯಾಸನ ಮಹಾಭಾರತಕ್ಕೆ ಮೂಲ ವ್ಯಾಸಮುನಿ ವಿರಚಿತ ಮಹಾಭಾರತವೆಂದು ಹೇಳಬಹುದು. ಈತನ ಮತ್ತು ಇವನ ಕಾವ್ಯದ ಹಿರಿಮೆಯ ಬಗ್ಗೆ ಒಬ್ಬ ಕವಿಯು ಜಗತ್ತಿನಲ್ಲಿರುವದೆಲ್ಲವು ಮಹಾಭಾರತದಲ್ಲಿದೆ. ಭಾರತದಲ್ಲಿದ್ದು ಜಗತ್ತಿನಲ್ಲಿ ಇಲ್ಲವೆಂದು ಸಾರಿದ್ದಾನೆ. ಇದಲ್ಲದೆ ಈ ಗ್ರಂಥವು ಪರಮಪೂಜ್ಯಗ್ರಂಥವೆಂದೂ ಪರಿಗಣಿತವಾಗಿದೆ. ಧರ್ಮದ ವಿಷಯಕವಾಗಿ ಅನೇಕ ವಿಚಾರಗಳು ಇದರಲ್ಲಿ ಬಂದುದರಿಂದ ಅನೇಕ ಕ್ಲಿಷ್ಟ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆನ್ನ ಬಹುದು. ಆದ್ದರಿಂದ ಇದು ಧರ್ಮಕ್ಕೆ ಒಂದು ಆಧಾರಗ್ರಂಥವಾಗಿರುವದರಿಂದ ಇದನ್ನುಜನತೆಯು ಪಂಚಮವೇದವೆಂದು ಪರಿಗಣಿಸಿದ್ದಾರೆ.

ಕಾವ್ಯದ ಮಧ್ಯದಲ್ಲಿ ಜನಮೇಜಯನಿಗೂ ಧೃತರಾಷ್ಟ್ರನಿಗೂ ಮತ್ತು ಋಷಿಗಳಿಗೂ ಧರ್ಮದ ವಿಷಯಕವಾಗಿ ಸಂದೇಹ ಹುಟ್ಟಿ, ಅದರ ನಿವಾರಣೆಗಾಗಿ ಧರ್ಮಜಿಜ್ಞಾಸೆ ನಡೆದಿದೆ. ಕಾವ್ಯದ ನರನಾಡಿಗಳಲ್ಲಿ ಧರ್ಮದ ರಸವು ಹರಿಯುತ್ತದೆ. ಆದರೆ ಈ ಮಹಾಭಾರತ ಕೇವಲ ಧರ್ಮಗ್ರಂಥವಲ್ಲ.

ಭರತ ಖಂಡದ ನಾಗರಿಕತೆಯ ಸಮಗ್ರ ಪರಿಚಯವನ್ನು ಮಾಡಿಕೊಡುತ್ತದೆ. ವ್ಯಾಸಮಹರ್ಷಿಯು ಸದಾಸತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು, ಯಾವ ಪಕ್ಷವನ್ನು ವಹಿಸದೇ ಅನುಭವ ವೇದ್ಯವಾದುದನ್ನು ಚಿತ್ರಿಸಿದ್ದಾನೆ.

ಬೃಹತ್ತು ಮತ್ತು ಮಹತ್ತುಗಳನ್ನು ಮೀರಿಸುವ ಕಾವ್ಯ ಜಗತ್ತಿನಲ್ಲಿ ಇನ್ನೂ ಹುಟ್ಟಿಕೊಂಡಿಲ್ಲ. ನೂರಾರು ಸಣ್ಣ ಪುಟ್ಟ ಕವಿಗಳು ಈ ಕಾವ್ಯ ವಾರಿಧಿಯಿಂದ ತಮ್ಮ ಕಾವ್ಯರತ್ನಗಳಿಗೆ ವಸ್ತುಗಳನ್ನಾಯ್ದು ಕೊಂಡಿದ್ದಾರೆ. ಎಷ್ಟು ತೆಗೆದು ಕೊಂಡರೂ ಮುಗಿಯದ ಕಾವ್ಯವಿದುಯೆಂದು ಹೇಳಬಹುದು. ಹೀಗೆ ಜನಪ್ರಿಯ ಕಾವ್ಯವಾದ ಮಹಾಭಾರತದ ಜೊತೆಗೆ ಸ್ಪರ್ಧಿಸುವ ಇನ್ನೊಂದು ಕಾವ್ಯವೆಂದರೆ ವಾಲ್ಮೀಕಿ ವಿರಚಿತ ರಾಮಾಯಣವೆನ್ನಬಹುದು. ರಾಮಾಯಣ ಮತ್ತು ಮಹಾಭಾರತದಲ್ಲಿ ಚಿತ್ರಿತವಾದ ಪಾತ್ರಗಳು ಸಜೀವ ವಾಗಿವೆನ್ನಬಹುದು. ರಾಮಾಯಣದಲ್ಲಿ ಚಿತ್ರಿತವಾದ ಪಾತ್ರಗಳಗಿಂತಲೂ ಮಹಾಭಾರತದ ಚಿತ್ರಿತವಾದ ಪಾತ್ರಗಳು ಜನರ ಮೆಚ್ಚುಗೆಯನ್ನು ಪಡೆಯು ವಲ್ಲಿ ಸಂಶಯವಿಲ್ಲ.

ಲೋಕ ಪ್ರಿಯವಾದ ಮಹಾಭಾರತ ಕಾವ್ಯಗಳನ್ನು ಕೇವಲ ನಮ್ಮವರು ಮಾತ್ರ ಬಾಯ್ತುಂಬ ಹೊಗಳುವದಲ್ಲದೇ ಹೊರಗಿನವರು ಸಹ ಅವುಗಳನ್ನು ಹೊಗಳಿದ್ದಾರೆ.

ಮಹಾಭಾರತವನ್ನು ರಚಿಸಿದ ಮಹಾ ಪುರುಷನ ಮೇಧಾಶಕ್ತಿಯನ್ನು ಅಳೆಯುವದು ಯಾರಿಗಾದರೂ ಸುಲಭವಲ್ಲ. ಈ ಬುದ್ಧಿ ಶಕ್ತಿಯನ್ನು ಅರಿತು ಕೊಳ್ಳಲು ಮಾಡುವ ಪ್ರಯತ್ನವೇ ಒಂದು ಉದಾರವಾದ ಅಭ್ಯಾಸವಾದೀತು. ಇದರಲ್ಲಿ ಯುದ್ಧದ ಪ್ರಭಾವಕಾರಿಯಾದ ಸಂಭಾಷಣೆ, ನೂರಾರು ಪಾತ್ರಗಳ ಚಿತ್ರಣ, ಮತ್ತು ಘಟನೆಗಳ ಮೇಲೆ ಘಟನೆಗಳು ಬಂದರೂ, ಒಂದೆಡೆ ಯಲ್ಲಿಯೂ ಕಾವ್ಯದ ರಚನೆಗೆ ಕುಂದುಬಂದಿಲ್ಲ. ಇದಲ್ಲದೇ ಇದರಲ್ಲಿ ಸಾಕಷ್ಟು ಉದಾಹರಣೆಗಳು, ಉಪದೇಶಗಳು ಬಂದಿವೆ. ಇವುಗಳ ಪಠಣದಿಂದ ಮಾನವನು ಸತ್ಯಾನುಭವವನ್ನು ಪಡೆದು ಬೇರೊಬ್ಬ ವ್ಯಕ್ತಿಯಾಗುತ್ತಾನೆಂದು ಹೇಳಬಹುದು.

# ೩. ಕನ್ನಡದಲ್ಲಿ ಮಹಾಭಾರತಗಳು.

ಸಂಸ್ಕೃತದಲ್ಲಿಯ ವ್ಯಾಸವಿರಚಿತ ಮಹಾಭಾರತವು ಅನೇಕ ಕವಿಗಳಿಗೆ ಕಾವ್ಯ ವಸ್ತುವನ್ನು ಒದಗಿಸಿಕೊಟ್ಟಿದೆ. ಇದಲ್ಲದೆ ಸಂಸ್ಕೃತ ಮಹಾಭಾರತವೇ ಅನೇಕ ಭಾಷೆಯಲ್ಲಿ ಪರಿವರ್ತನೆ ಹೊಂದಿದೆ. ಕನ್ನಡದ ಆದಿಕವಿಯಾದ ಪಂಪನು ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತವನ್ನು ಕನ್ನಡದಲ್ಲಿ ರಚಿಸಿದ್ದಾನೆ. ಇದು ಅದ್ವಿತೀಯವಾದ ಕೃತಿಯೆಂದು ಹೇಳಬಹುದು. ಪಂಪನ ತರುವಾಯದ ಕವಿಗಳು ಈತನನ್ನು ಮುಕ್ತ ಕಂಠದಿಂದ ಹೊಗಳಿದ್ದಾರೆ. ಆತನ ತರುವಾಯ ಭಾರತ ರಚನೆಯಿಂದ ಪ್ರಖ್ಯಾತ ಕವಿಯೆಂದರೆ ಗದುಗಿನ ಕವಿ ಕುಮಾರವ್ಯಾಸನೆನ್ನಬಹುದು. ಪಂಪ ಮತ್ತು ಕುಮಾರವ್ಯಾಸರು ಒಂದೊಂದು ದೃಷ್ಟಿಯಿಂದ ಶ್ರೇಷ್ಠರೆಂದು ಹೇಳಬಹುದು.

ನಾಡೋಜನಾದ ಪಂಪನು ಚಾಳುಕ್ಯವಂಶದ ಅರಿಕೇಸರಿಯ ಆಸ್ಥಾನ ಕವಿಯಾಗಿ ಬದುಕಿದನು. ಆತನು ಬದುಕಿದ್ದ ಭಾರತದ ವೀರಯುಗದಲ್ಲಿ ಇದ್ದುದರಿಂದ, ಈತನು ತನ್ನ ಕಾವ್ಯದಲ್ಲಿ ವೀರರಸದ ಹೊಳೆಯನ್ನೇ ಹರಿಸಿದ್ದಾನೆ. ಆದರೆ ನಾರಾಯಣಪ್ಪನ ಸ್ವಭಾವ ಸನ್ನಿವೇಶಗಳೇ ಬೇರೆಯೆಂದು ಹೇಳಬಹುದು. ಆದರೆ ಈತನ ಕಾಲ ಭಕ್ತಿಯುಗ. ಅನೇಕ ಶಿವಶರಣರು, ಹರಿದಾಸರು, ಭಕ್ತಿಯನ್ನು ನಾಡಿನ ಮೂಲೆಮೂಲೆಗೆ ಹಬ್ಬಿಸುತ್ತಿದ್ದ ಕಾಲವಿದೆಂದು ಹೇಳಬಹುದು. ನಾರಾಯಣಪ್ಪನು ಯಾವ ರಾಜನ ಆಶ್ರಯದಲ್ಲಿಯೂ ಇದ್ದಿಲ್ಲವೆನ್ನಬಹುದು. ಇವನು ಕೇವಲ ಬಡವ. ಹೆಚ್ಚೆಂದರೆ ಶಾನುಭೋಗನೆನ್ನಬಹುದು. ಈತನ ಕಾವ್ಯಕ್ಕೆ ಶಕ್ತಿ ಗದುಗಿನ ವೀರನಾರಾಯಣನೆಂದು ಹೇಳುವುದು. ಆದ್ದರಿಂದಲೇ ಈತನ ಕಾವ್ಯದ ಭಕ್ತಿಭಾವ ಉಕ್ಕಿ ಹರಿಯುತ್ತದೆ.

ಮಹಾ ಕವಿ ಪಂಪ ಮತ್ತು ನಾರಾಯಣಪ್ಪನ ಕಾವ್ಯದ ಸೊಬಗೇ ಬೇರೆ ಬೇರೆಯೆನ್ನಬಹುದು. ಪಂಪ ಕಾವ್ಯ ಬರೆದುದು ಕೇವಲ ದೊರೆ ಮೆಚ್ಚಿಗಾಗಿ ಮತ್ತು ಆಸ್ಥಾನಗಳಲ್ಲಿಯ ಕವಿಗಳ ಮೆಚ್ಚಿಗೆಗಾಗಿ ಯೆಂದೆನ್ನಬಹುದು. ಆದರೆ ನಾರಾಯಣಪ್ಪನ ಕಾವ್ಯ ಬ್ರಹ್ಮಪುತ್ರಾ ನದಿಯಂತೆ ಭೋರ್ಗರೆಯುತ್ತ ಹರಿಯುವದು.

ಪಂಪನು ತನ್ನ ಕಾವ್ಯಕ್ಕೆ ಅಲಂಕಾರ, ಛಂದಸ್ಸು, ವ್ಯಾಕರಣಗಳಿಗೆ ಕಡಿವಾಣವಿಕ್ಕಿ ಹೆದ್ದಾರಿಯಲ್ಲಿ ನಡೆಯಿಸುತ್ತಿದ್ದರೆ, ನಾರಾಣಪ್ಪನ ಕಾವ್ಯ ಪಕ್ಷಿಸ್ವಚ್ಛಂದವಾಗಿ ಗಿರಿವನ ನದಿಗಳ ಮೇಲೆ ಹಾರಿಹೋಗುತ್ತಿದೆ. ಈತನ ದೃಷ್ಟಿ ಜನಸಾಮಾನ್ಯರ ಮನೋರಂಜನೆ, ಉದ್ಧಾರ, ಇವರಿಗೆ ಅರ್ಥವಾಗುವಂತೆ ಇರುವದಾದರೆ ಕಾವ್ಯನಿಯಮಗಳು ಹಾರಿಹೋದರೂ ಈತನಿಗೆ ಚಿಂತೆಯಿಲ್ಲ. ಆದುದರಿಂದ ಈತನು ಪಂಪನಷ್ಟು ಪ್ರಸಿದ್ಧಿ ಹೊಂದಲಿಲ್ಲ. ಆದರೆಪಂಪನಿಗೂ ನಾರಾಣಪ್ಪನಿಗೂ ದೊರೆತ ಜನಪ್ರಿಯತೆ ಮತ್ತಾವ ಕವಿಗೂ ದೊರೆಯಲಿಲ್ಲ.

ಕನ್ನಡ ಸಾಹಿತ್ಯದಲ್ಲಿ ಈ ಇಬ್ಬರು ಕವಿಗಳು ಶ್ರೇಷ್ಠದರ್ಜೆಯವರೆಂದು ಹೇಳಬಹುದು. ಆದರೆ ಈ ಇಬ್ಬರು ಮಹಾಕವಿಗಳಲ್ಲಿರುವ ವ್ಯತ್ಯಾಸವೆಂದರೆ ಇವರು ಮೂಲವನ್ನು ಬಳಸಿಕೊಂಡು ಹೋಗಿರುವ ರೀತಿ. ಇಬ್ಬರೂ ತಮ್ಮ ಕಾವ್ಯಕ್ಕೆ ಮೂಲ ವ್ಯಾಸ ಮಹರ್ಷಿ ವಿರಚಿತ ಮಹಾಭಾರತವನ್ನು ಆಯ್ದುಕೊಂಡರೂ, ಆದರ ಸಂಗ್ರಹ ಕಾರ್ಯದಲ್ಲಿ ಅವರಿಬ್ಬರ ದೃಷ್ಟಿಕೋನದಲ್ಲಿ ಅಂತರವಿದೆಯೆನ್ನಬಹುದು. ಜೈನಧರ್ಮಕ್ಕೆ ಸೇರಿದ ಕವಿಯಾದ ಪಂಪನು ಬರೆಯುತ್ತಿರುವದು ಕೇವಲ ಭಾರತವಲ್ಲ, ಸಮಸ್ತ ಭಾರತವೆನ್ನಬಹುದು. ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಕಥಾನಾಯಕನನ್ನಾಗಿ ಮಾಡಿಕೊಂಡು ಕಾವ್ಯವನ್ನು ಸೃಷ್ಟಿಸಿದ ಮತ್ತು ತನ್ನ ಕಾವ್ಯಕ್ಕೆ 'ವಿಕ್ರಮಾರ್ಜುನ ವಿಜಯ'ವೆಂದು ಹೆಸರಿಟ್ಟು ಕರೆದನು. ಪಂಚವಲ್ಲಭೆಯಾದ ದ್ರೌಪದಿಯನ್ನುಅರ್ಜುನನಧರ್ಮಪತ್ನಿ ಯನ್ನಾಗಿ ಸ್ವೀಕರಿಸಿದ. ಹೀಗೆ ಆತನುಮಾಡಿಕೊಂಡ ಬದಲಾವಣೆಗಳು ಯಶಸ್ವಿಯಾಗಿವೆಯೆಂದಾಗಲಿ ಸರ್ದಿಷ್ಟವಾಗಿವೆಯೆಂದಾಗಲಿ ಹೇಳುವಂತೆಯಿಲ್ಲ.

ನಾರಾಣಪ್ಪನ ನೋಟ 'ವಿಕ್ರಮಾರ್ಜುನವಿಜಯ'ಕ್ಕಿಂತ ಭಿನ್ನವಾದುದು. ಆತನ ಕಾವ್ಯಕ್ಕೆ ಕಥಾನಾಯಕ ಶ್ರೀಕೃಷ್ಣ. ಭಗವಂತನ ಅವತಾರವಾದ ಆತ ಭೂಭಾರಹರಣಕ್ಕಾಗಿ ಟೊಂಕ ಕಟ್ಟಿದ್ದಾನೆ. ದುಷ್ಟ ಶಿಕ್ಷಣ, ಶಿಷ್ಟ ರಕ್ಷಣಕ್ಕಾಗಿ ಕಂಕಣ ಕಟ್ಟಿದ್ದಾನೆ. ಆತನು ಭಗವಂತನೆಂದು ಕಾವ್ಯದ ಎಲ್ಲ ಪಾತ್ರಗಳಿಗೂ ಅರಿವು ಇದೆ.

ಪಂಪ ಮಹಾಕವಿಯ ನುಡಿಗಳು ಗಂಭೀರವಾಗಿ ಸೂತ್ರದಂತಿವೆ. ಎರಡೇ ಮಾತುಗಳಲ್ಲೇ ದೊಡ್ಡ ಕತೆಗಳನ್ನು ಅಡಕ ಮಾಡಿಬಿಡುತ್ತಾನೆ. ಆದರೆ ನಾರಾಣಪ್ಪನು ಹಾಗಲ್ಲ. ಹಿಗ್ಗಿಸುವದು ಆತನ ಹುಟ್ಟುಗುಣವೆನ್ನ ಬಹುದು.

ಒಟ್ಟಿನಲ್ಲಿ ಹೇಳುವದಾದರೆ ಪಂಪ ಕವಿಯು ತನ್ನ ಕಾವ್ಯ ಶಕ್ತಿಯನ್ನು ಎರಡು ಕವಲುಗಳಾಗಿ ಪ್ರವಹಿಸಿದ. ಲೌಕಿಕ ಕಾವ್ಯವನ್ನು ಬರೆಯುವನೆಂದು ಭಾರತವನ್ನು, ಧರ್ಮಧ್ವಜವನ್ನು ಎತ್ತಿ ಹಿಡಿಯುವನೆಂದು'ಆದಿಪುರಾಣವನ್ನು ಬರೆದನು. ಆದರೆ ನಾರಾಣಪ್ಪನು ತನ್ನ ಶಕ್ತಿಯ ಸರ್ವಸ್ವವನ್ನು ಒಂದು ಕಾವ್ಯದ ಸೃಷ್ಟಿಗಾಗಿ ಮೀಸಲಾಗಿರಿಸಿದ. ಆತನ ಕಾವ್ಯ ಶಕ್ತಿಯೂ ಧರ್ಮ ಶಕ್ತಿಯೂ ಹುರಿಗೊಂಡೇ ಹೊರಹೊಮ್ಮಿತು. ಇದರಿಂದ ಆತನ ಕಾವ್ಯ ಅಲೌಕಿಕವಾದ ತೇಜಸ್ಸಿನಿಂದ ಬೆಳಗುವಂತಾಗಿದೆ. ಮಹಾ ಕವಿ ಪಂಪನಿಗೆ ಮತ್ತು ಗದುಗಿನ ಕವಿ ನಾರಾಣಪ್ಪನನ್ನು ಹೋಲಿಸುವಾಗ ಈ ಪ್ರಮುಖವಾದ ವ್ಯತ್ಯಾಸವನ್ನು ಮರೆಯಬಾರದು. ನಾರಾಣಪ್ಪನು ತನ್ನ ಭಕ್ತಿಯ ಆವೇಶ ದಲ್ಲಿ ಮೈಮರೆತು ಮುಗಿಲು ಮುಟ್ಟುವಂತೆ ಬರೆದಿರುವ ಭಾಗಗಳಿಗೆ ಹೋಲಿ ಸಲು ಕನ್ನಡ ಸಾಹಿತ್ಯದಲ್ಲಿ ಇನ್ನೊಂದು ಕಾವ್ಯವಿಲ್ಲವೆಂದು ಧಾರಾಳವಾಗಿ ಹೇಳಬಹುದು.

ವಿರಾಟ ಪರ್ವಸಂಗ್ರಹ,

## ೧. ಮಂಗಳಾಚರಣೆ.

೧) ಲಕ್ಷ್ಮೀಪತಿಯು, ಬ್ರಹ್ಮನ ತಂದೆಯು, ಜಗತ್ತಿಗೆ ಅತಿ ಶ್ರೇಷ್ಠ ನಾದಂಥವನೆ ಸನಕಾದಿ ಸಜ್ಜನ ಸಮೂಹಕ್ಕೆ ದಾನಿ, ರಾವಣಾಸುರ ಮಥನ ವಿನೂತನ ಕಥೆಗೆ ಕಾರಣನಾದ, ಜನರಕ್ಷಕನಾದ, ಗದುಗಿನ ವೀರನಾರಾಯಣ ನಿಗೆ ನಮಸ್ಕರಿಸುತ್ತೇನೆ.

೨) ವೀರನಾರಾಯಣನೆ ಕವಿ. ಲಿಪಿಕಾರನು ಕುಮಾರವ್ಯಾಸ ಕೇಳುವ ವಿದ್ವಾಂಸರು ಸನಕಾದಿ ಜಂಗಮ ಜನಾರ್ದನರು. ಇದು ಮನೋ ಹರವಾದ ಕವಿತೆಯ ಬಳಿಕೆಯಲ್ಲ.ಇದನ್ನು ವಿಚಾರಿಸಲು ಯೋಗ್ಯವಲ್ಲ. ಜ್ಞಾನಿ

ಗಳಾದ ಕವಿಗಳ ಲಕ್ಷ್ಯವೆಳೆಯುವ ಸಲುಗೆಯು ಬಿನ್ನಹವಿದೆಂದು ಹೇ ಬಹುದು.

೩) ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದ ರಘುವರನ ಚರಿತೆಯ ಸಮೂಹದಲ್ಲಿ ಕಾಲಿಡಲು ತೆರಪಿಲ್ಲ. ಸಾಮಾ ಕವಿಗಳನ್ನು ಲೆಕ್ಕಿಸುವನೆ. ಸಾಕೆಣಿಸದಿರು. ವ್ಯಾಸರಿಗೆ ಶುಕರೂಪನಾದ ಕು ಕುಮಾರವ್ಯಾಸನು ಉಳಿದ ಕವಿಗಳನ್ನು ಕುಣಿಸಿನಗುವನೇ.

೪) ಹಲಗೆ ಬಳಪವ ಹಿಡಿಯದ ಅಗ್ಗಳಿಕೆ, ಪದನಿಟ್ಟಳುಪದೊಂದ ಳಿಕೆ, ಪರರರೀತಿಯನ್ನು ತೆಗೆದುಕೊಳ್ಳದ ಅಗ್ಗಳಿಕೆ, ಬಳೆಸಿಬರೆಯುವ ವುಲುಹುಗೆಡದಂತೆ ಬರೆದ ಅಗ್ಗಳಿಕೆಗಳಿಂದೊಡಗೂಡಿದವನು ಗದುಗಿನ ವೀ ನಾರಾಯಣ ಕಿಂಕಿರ (ಸೇವಕ).

೫) ಕುಮಾರ ವ್ಯಾಸನಭಾರತವು ಅರಸುಗಳಿಗೆ ವೀರವಾದಂಥಹದ ಬ್ರಾಹ್ಮಣರಿಗೆ ಪವಿತ್ರವಾದ ವೇದಸಾರ, ಯೋಗಿಗಳಿಗೆ ತತ್ವವಿಚಾರ, ಮಂ ಜನಕ್ಕೆ ಬುದ್ಧಿಗುಣ, ವಿರಹಿಗಳಿಗೆ ಶೃಂಗಾರ, ವಿದ್ಯಾಪರಣಿತ ಅಲಂಕಾ ಕಾವ್ಯಕ್ಕೆ ಗುರುವೆನಿಸಿದ ಕುಮಾರವ್ಯಾಸನು ಭಾರತವನ್ನು ರಚಿಸಿದನು.

೬) ವೇದಗಳನ್ನು ಪಠಣಮಾಡಿದ ಫಲ, ಗಂಗಾನದಿಯ ತೀರ್ಥದ ಸ್ನಾನ ಮಾಡಿದ ಫಲ, ಕೃಚ್ಛ್ರಾದಿ ತಪಸ್ಸಿನ ಫಲ, ಜ್ಯೋತಿಷ್ಟೋಮ ಯಾಗದ ಫಲ, ಮೇದಿನಿಯನೊಲಿದಿತ್ತ ಫಲ, ವಸ್ತ್ರ ಮತ್ತು ಕನ್ಯಾದಾ ಮಾಡಿದ ಫಲ ಭಾರತ ಪುಣ್ಯಕಥಾಶ್ರವಣ ಮಾಡಿದವರಿಗೆ ಲಭಿಸುತ್ತದೆ.

## ೨. ಅನಿಬರಿಗಾಯ್ತು ನಿರ್ವಾಹ.

೧) ಜನಮೇಜಯರಾಜನೇ ಕೇಳು ಭೂಮಿಪತಿಯು ಮುನಿಜ ಮತ್ತು ಪರಿಜನಗಳನ್ನು ಬೀಳುಕೊಟ್ಟನು. ಹುತ ಹವನದಿಂದ ಬಲಬಂದ ಮನೋಹರವಾದ ಧ್ವನಿಯನ್ನು ಕೇಳುತ್ತ ಸೋದರರು ಸಹಿತ ಹೊರಹೊರು ಆಲದ ಮರದ ಹತ್ತಿರಬಂದರು.

೨) ಆಲದ ಮರದ ಅಡಿಯಲ್ಲಿ ಐವರು ನಿಂತು ದ್ರೌಪದಿಯ ಸಹಿತ ಗಿಡದ ನೆಳಲೊಳಗೆ ವಿಶ್ರಮಿಸಿದರು. ಹಿಂದೆ ಹನ್ನೆರಡು ವರ್ಷ ಸವೆದ ಇನ್ನೊಂಡು ವರ್ಷ ಅಜ್ಞಾತವಾಸವಿದೆಯೆಂದು ಧರ್ಮರಾಯನುಚಿಂತಿಸಿದನ

೩) ಬಡಗಣ ದಿಕ್ಕೆಲ್ಲವು ಕೌರವರದು, ಮೂಡಣದ ಅರಸರು ಆ ಕೌರವರ ಗೆಳೆಯರು, ತೆಂಕಣಕಡೆಯ ಅರಸರೆಲ್ಲರೂ ಪಾಂಡವರಿಗೆ ಚಿರಪರಿಚಿತರು; ಆದರೆ ಅಲ್ಲಿನ ಅಕ್ಕ ಪಕ್ಕದವರೆಲ್ಲರೂ ಚಾಡಿಕೋರರು. ಪಡುವಣರು ಕೇವಲ ಅಶಕ್ತರು. ನಮಗೆ ಅಡಗಿಕೊಂಡಿರಲು ತಕ್ಕ ಸ್ಥಳವೇ ತೋಚ ಲೊಲ್ಲದು ಎಂದು ಅರ್ಜುನನು ಧರ್ಮರಾಯ ಮತ್ತು ಅವನ ತಮ್ಮಂದಿರಿಗೆ ಸೂಚಿಸಿದನು.

೪) ಒಳಿತವನು ಹೊಕ್ಕಿರದು, ಕೀಚಕನು ಕೌರವರೊಳಗೆ ವೈರಿಯಾಗಿರುವನು. ವಿರಾಟಪುರದಲ್ಲಿ ಕೀಚಕನ ಬಲವಿರುತ್ತದೆ. ಆದ್ದರಿಂದ ಆ ಸ್ಥಳವು ಯೋಗ್ಯವೆಂದರು.

೫) ಮತ್ಸ್ಯಾಧಿಪನ ನಗರದಲ್ಲಿ ಸ್ವೈರಿಸಿ ಕೃಪಣತನದಲ್ಲಿ ನೂಕಬಹುದೆಂದು ನೃಪತಿಯು ನಿಶ್ಚಯಿಸಿ ನುಡಿದನು. ಅಲ್ಲಿ ಒಂದು ವರ್ಷ ಅಜ್ಞಾತವಾಸನನ್ನು ನಿರ್ಭಯವಾಗಿ ವಿರಾಟನಗರದ ಆಶ್ರಯದಲ್ಲಿ ಕಳೆಯಬೇಕೆಂದು ಧರ್ಮನಂದನನು ಹೇಳಿದನು.

೬) ದೇವ ನಿಮ್ಮಯ ಮತವೆ ಮತ. ಎಮಗೆ ಯಾವ ವೇಷದ ವಿವರ. ನೀವು ಹೇಳಿಯೆಂದು ಭೀಮಾರ್ಜುನರು ಬಿನ್ನವಿಸಿಕೊಳ್ಳಲು, ನಾವು ಸಂಭಾವಿತರಾದುದರಿಂದ ಭೂಸುರವೇಷದಲ್ಲಿರುವದರಿಂದ ಸನ್ಯಾಸವಲಂಬನ ಕಂಕನೆಂಬ ಹೆಸರು ನನಗೆ ಯೆಂದನು.

೭) ವಲಲನೆಂಬ ಹೆಸರಿನಲ್ಲಿ ಅರಮನೆಯನ್ನು ಪ್ರವೇಶಿಸುತ್ತೇನೆಂದು ಭೀಮನು ನುಡಿದನು. ಶ್ರೇಷ್ಠನಾದ ನಟನ ವೇಷದಲ್ಲಿ ಅರ್ಜುನನ್ನು, ಕುದುರೆ, ದನಕಾಯುವ ಕೆಲಸವು ನಕುಲ ಸಹದೇವರಿಗೆ ಎಂದು ಸ್ತ್ರೀಯರೆನಲು, ಸೈರಂಧ್ರಿ ವೇಷವನ್ನು ದ್ರೌಪದಿಯು ಬಿನ್ನವಿಸಿಕೊಂಡಳು.

೮) ನೃಪತಿಯು ಸಂತುಷ್ಟನಾದನು. ಮತ್ತೆ ಸಹೋದರರು ಸಹಿತ ದುಷ್ಟಮೃಗಗಳ ಬೇಟೆಯಾಡಿ ವಿಶಿಷ್ಟಮುನಿಯಾಶ್ರಮದ ಒಳ್ಳೆಯ ಜನರ ಇಷ್ಟವನ್ನು ಪರಿಹರಿಸಲೆಂದು ಸರಾಗವಾಗಿ ಆಗಮಿಸಿದರು.

೯) ಅಷ್ಟೂ ಜನರು ವಿರಾಟ ನಗರದ ನಂದನದ ಕಡೆಗೆ ನಿಂತು ನಾಲ್ಕುದಿಕ್ಕನ್ನು ನೋಡಿದರು ತಂದಂಥಹ ತಮ್ಮ ಎಲ್ಲ ಆಯುಧಗಳನ್ನು

P

ಒಂದು ಚರ್ಮದಲ್ಲಿ ಹೆಣದಾಕಾರವಾಗುವಂತೆ ಬಿಗಿದು ಕಟ್ಟಿ ಬನ್ನಿಯ ಮರದ ತುದಿಯಲ್ಲಿ ಕಟ್ಟಲು ಏರಿದರು.

೧೦) ಧರ್ಮಸುತನು ತೆಗೆಯದಿರಿಯೆಂದು ದನಕಾಯುವರಿಗೆ ಅಂಜಿಸಿ ಕಣ್ಣುಗಳನ್ನು ಮುಚ್ಚಿ ಸುರೇಂದ್ರ, ಯಮ ಮತ್ತು ವರುಣಾದಿ ದೇವತೆಗಳಿಗೆ ನಮಸ್ಕರಿಸಿ ಭಯಂಕರನಾದ ಈ ಕಲಿಭೀಮನು ಆಯುಧಗಳನ್ನು ಬಚ್ಚಿಟ್ಟು ಕೈಮುಗಿದು ಬೇಡಿದನೆಂದು ದೇವತೆಗಳಿಗೆ ಧರ್ಮರಾಜನು ಹೇಳಿದನು.

೧೧) ಅಜ್ಞಾತವಾಸದಲ್ಲಿ ಭೀಮನು ಆಯುಧಗಳನ್ನು ಬೇಡಿದರೆ ಕೊಡಬೇಡಿರೆಂದು ಬೇಡಿಕೊಂಡಾಗ, ಕೋಪಗೊಂಡು ಆವನು ನೀವು ಕುಂತಿಯ ಮಕ್ಕಳಾದಿರಿ ನಾವು ಧುರ್ಯೋಧನರವರೆ, ಎಂದು ಕೋಪದಿಂದ ಗರ್ಜಿಸಿದನು.

೧೨) ದೇವತಗಳ ಸಮೂಹ ಕಾದಿರಲಿ, ಮೇಣೀ ಧರಣಿಯನ್ನು ಕೊಡುವದಿಲ್ಲವೆಂದಾಗ ಇಂದ್ರನ ಪುರಿಗೆ ದಾಳಿಯನ್ನಿಟ್ಟು ದೇವತೆಗಳ ಮೋರೆಗೆ ತಿವಿದು ಶ್ರೇಷ್ಠನಾದ ಅಸ್ತ್ರವನ್ನು ಒಯ್ಯುವೆನೆಂದು ಭೀಮನು ಅಬ್ಬರಿಸಿದಾಗ, ತಮ್ಮನ ಸಿಟ್ಟನ್ನು ಭೂಪಾಲನು ನಿಲ್ಲಿಸಿ ಅವನನ್ನು ಅಪ್ಪಿಕೊಂಡನು.

೧೩) ಭೀಮನನ್ನು ಧರ್ಮರಾಯನು ಸಮಾಧಾನ ಪಡಿಸಿ ವಿರಾಟನ ಆಸ್ಥಾನಕ್ಕೆ ಯತಿ ವೇಷದಲ್ಲಿ ಬಂದನು. ಬಂಗಾರದ ಪಗಡೆಯ ಕಾಯಿಯ ಚೀಲವನ್ನು ಬಗಲಲ್ಲಿ ಹಾಕಿಕೊಂಡು ತೇಜಃಪುಂಜದಲ್ಲಿ ಸೊಂಪಡವಿ ಬರಲು ವಿರಾಟ ಕಾಣಿಸಿಕೊಂಡು ಬೆಸಗೊಂಡನು.

೧೪) ಇತ್ತ ದಯಮಾಡಿಸಿದ ಹಿರಿಯರು ಎತ್ತಕಡೆಯಿಂದ ಬಂದಿರಿ ಅತ್ಯುತ್ತಮವಾದ ವೇಷದಲ್ಲಿರುವ ಮಹಾತ್ಮರನ್ನು ಕಂಡು ಬದುಕಿದ್ದೇವೆ. ಎಂದಾಗ ಇತ್ತ ನಾವು ರಾಜಸೇವೆಯ ನಿಮಿತ್ತವಾಗಿ ಬಂದೆವುವೆಂದರು.

೧೫) ತಾವು ಇಂದ್ರಪ್ರಸ್ಥದವರೆಂದು ಪಾಂಡವರು ನಾರುಸೀರೆಯನ್ನುಟ್ಟು ಹೋದರು. ನಾರುಸೀರೆಯು ನಟ್ಟಡವಿ ಅವರಿಗೆ ಮನೆಯಾಯ್ತು ಜಠರ ಭರಣಕ್ಕೆ ಆಶ್ರಯವನ್ನು ಹುಡುಕುತ್ತ ಬಂದುದಾಗಿಯೂ ತನ್ನ ಹೆಸರು ಕಂಕನೆಂಬುದಾಗಿಯೂಯೆಂದು ಹೇಳಿಕೊಂಡನು.

೧೬) ಓಲಗಕೆ ಬಂದ ಅಖಿಳರಾಯರ ತಲೆಯ ಮುತ್ತಿನ ಕಿರಣವನ್ನು ನಿವಾಳಿಸುವಲ್ಲಿ ಮೆರೆಯುವ ದಾತನಿಗೆ ಕೀಳುಮಾಡಲಾಗದೆಂದು

ನಿಶ್ಚಯಿಸಿ ಧರ್ಮ ಪುತ್ರನು ವಿರಾಟನಗರದಲ್ಲಿ ವಾಸಮಾಡ ಹತ್ತಿದನು. ಜನ್ಮೇಜಯ ಕ್ಷಿತಿಪನೆ ಕೇಳು.

೧೭) ವಿರಾಟ ರಾಜನಿಂದ ಕಂಕನಿಗೆ ವಿವಾದವಿಲ್ಲದೆ ಸೇವೆ ನಿಜವಾದಂತಿರುತಿರಲು, ಕೆಲವು ದಿನ ಕಳೆದ ಮೇಲೆ ಬಾಣಸು ವೇಷದಲ್ಲಿ ರಿಪುಭೇದಿ ಭೀಮಸು ಭೂಪತಿಯನ್ನು ಕಂಡನು.

೧೮) ಏನು ಪರಿಣತಿ ನೀನು ಭೀಮನ ಮನೆಯಲ್ಲಿ ಅಡಿಗೆಯವನಿದ್ದಿ. ಭುಜಬಲದಲ್ಲಿ ಶ್ರೇಷ್ಠ, ಮಲ್ಲವಿದ್ಯೆಯಲ್ಲಿ ನೀನು ಶ್ರೇಷ್ಠನೆಂದು ವಾಯುಪುತ್ರನು ಮನ್ನಿಸಿದ ಎಂದಾಗ ಇತ್ತಕಡೆ ಮಾನ ನಿಧಿ ಪಾರ್ಥನಾ ಹೊಳಲವನು ಪ್ರವೇಶಿಸಿದನು.

೧೯) ದೇವತೆಗಳ ಅರಸಿಯ ಶಾಪದಲ್ಲಿ ಸಿತ ತುರಗವು ನರೆವೆಣ್ಣಾಗಿ ಅರ್ಜುನನು ಮತ್ಸ್ಯೇಶ್ವರನ ಮಗಳಿಗೆ ನಾಟ್ಯ ವಿದ್ಯಾಭ್ಯಾಸದಲ್ಲಿ ಇರಲು, ಯಮಳರು ಕುದುರೆ, ದನಕಾಯುವದರಲ್ಲಿ ನಿರತರಾದರು. ಬಳಿಕ ಪಾಂಡವರರಿಸಿ ಸೈರಂಧ್ರಿ ವೇಷದಿಂದ ಪುರಪ್ರವೇಶಮಾಡಿ ಮಹಾರಾಣಿಯಲ್ಲಿ ಆಶ್ರಯ ಪಡೆದಳು.

೨೦) (ಜನರು ಆಕೆಯಲ್ಲಿರು ಅದ್ವೀತಿಯ ಸೌಂದರ್ಯವನ್ನು ಕಂಡು ಚಿತ್ತಚಂಚಲರಾದರು. ಈ ಹೆಣ್ಣು ಮಾನವಿಯಲ್ಲ. ಮನುಷ್ಯಳಿಗೆ ಇಂಥ ರೂಪವೆಲ್ಲಿಯದು ಎಂದು ಆಶ್ಚರ್ಯಗೊಳ್ಳುತ್ತ ಮತ್ಸ್ಯೇಶನರಸಿಯರು ಮನದೊಳಗೆ ಅಳುಕಿದರು.)

೨೧) ಅವಳ ಬರುವಿಕೆಯನ್ನು ಕಂಡು ಸುದೇಷ್ಣೆ ಮನದಲ್ಲಿ ಹರ್ಷ ಹೆಚ್ಚಾಗಿ ಕರೆ ಕರೆ ತರುಣಿಯಾರೆಂದು ಎಲ್ಲ ದಾಸಿಯರನ್ನು ಕಳುಹಿದಳು. ಪರಿಮಳದ ಗಂಧವನ್ನು ಬೀರುತ್ತ ಅವಳು ರಾಜಮಂದಿರವನ್ನು ಪ್ರವೇಶಿಸಿದಳು.

೨೨) ಕೆಳದೆಯರು ಅವಳನ್ನು ತೋರಿಸಿದಾಗ ಸುದೇಷ್ಣೆಯು ಅವಳನ್ನು ಪರಿಯಂಕ ಪೀಠದ ಒಳಗೆ ಕರೆದು, ಉಚಿತವಾದ ಮಾತುಗಳಲ್ಲಿ ನಳಿನಮುಖಿ ನೀನಾರು? ನಿನಗೆ ರಮಣರಾರು? ಮಾಸಿಕೊಂಡಿಹ ವೃತ್ತಿ ನಿನಗೇಕೆ? ಎಂದು ಆ ಸ್ತ್ರೀಗೆ ಬೆಸಗೊಂಡಳು.

೨೩) ಅತಿಯಾದ ಬಲವುಳ್ಳ ಗಂಧರ್ವರೈವರು ನನ್ನ ಪತಿಗಳು. ಕುಂತಿ ಕುಮಾರರ ಸತಿಯರನ್ನು ನಾನು ಓಲೈಸುತ್ತಿದ್ದೆನು. ಬಳಿಕ ಅವರು ವನವಾಸಿಗಳಾದ್ದರಿಂದ ತನಗೆ ಇಲ್ಲಿ ಬರವಾಯ್ತು' ಎಂದಳು.

೨೪) ಹೀಗೆ ಅವಳು ಹೇಳಲಾಗಿ ವಿರಾಟನ ಹೆಂಡತಿ ಅವಳನ್ನು ಮೆಚ್ಚಿದಳು. ವೀರರಾದ ವಧುಗಳನ್ನು ಸಖಿಜನರೊಳಗೆ ಮನ್ನಿಸದೆ ಅವರೆಲ್ಲರಿಗೆ ನಿರ್ವಾಹವಾಯ್ತು. ಅವರ ಮನಸ್ಸಿನ ಬೇನೆಯು ಮತ್ಸ್ಯನ ಪುರಾಂತರದೊಳಗೆ ಮೈಮರೆಸಿಕೊಂಡು ಉನ್ನತ ಸತ್ವ ಉಳ್ಳವರಾಗಿ ಇದ್ದರು. ಭೂಪ ಕೇಳೆಂದ.

## ೩. ಕೀಚಕರಾಯ ವಂಶಾರಣ್ಯವನ್ನು ಸವರಿದನು.

## (ಸಾರಾಂಶ)

೧) ಒಂದು ದಿವಸ ವಿರಾಟನರಸಿಯ ತಮ್ಮನಾದ, ಕೀಚಕನು ಅರಮನೆಗೆ ಭೆಟ್ಟಿಕೊಡಲು, ಇಕ್ಕೆಲ ಸತಿಯರ ಮಧ್ಯದಲ್ಲಿ ಮರೆಯುವ ಸೈರಂಧ್ರಿಯ ವೇಷದ ದ್ರೌಪದಿಯನ್ನು ಕಂಡನು.

೨) ತಮ್ಮನನ್ನು ತೆಗೆದಪ್ಪಿ, ಸಿಂಹಾಸನದ ಕೆಲದೊಳ್ ಇರಿಸಿ, ಹರ್ಷದಿಂದ ಸಹೋದರನನ್ನು ಕಂಡು ಆನಂದಪಟ್ಟು, ಆಗ ಅವನು ಉಬ್ಬಿನಲಿ ಸತ್ಕೃತನಾಗಿ ಸುದೇಷ್ಣೆಯ ಮೇಳದಲ್ಲಿ ಕಮಲಾನನೆಯರನು ಕಂಡನು.

೩) ಅವರ ಮಧ್ಯದೊಳು ತಾರೆಗಳ ಸಮೂಹದಲ್ಲಿ ರೋಹಿಣಿಯಂತೆ ಸುಕೆಯುವತಿಯರ ಮಧ್ಯದಲ್ಲಿ ಸುರಯುವತಿಯರಂತೆ ನದಿಗಳಲಿ ಜಾಹ್ನವಿಯಂತೆ ಅವಯವದ ಪರಿಮಳದ ಪಸರಿಕೆ ಕವಿವ ತುಂಬಿಯ ಸಾರಸಂಗೀತನ ಕೇಳುತ್ತ ದ್ರೌಪದಿಯನ್ನು ನೋಡಿದನು,

೪) ಅವಳ ದೇಹದ ಸೌಂದರ್ಯವನ್ನು ನೋಡಿದ ಅವನ ಕಣ್ಣುಗಳು ಆಕೆಯಲ್ಲಿಯೇ ಗಾಢವಾಗಿ ನಟ್ಟವು. ಅದರೊಡನೆ ಆತನ ಹೃದಯದಲ್ಲಿ ಮನ್ಮಥನ ಮೊಣಚಾದ ಬಾಣಗಳು ಆಳವಾಗಿ ನಟ್ಟವು. ಅತುಳ ಬಲನಾದ ಖಳನು ಹೆದರಿ ಹಮ್ಮೈಸಿದನು.

೫) ಜಗತ್ತಿನ ಮಾನವ ಮೃಗಗಳನ್ನೆಲ್ಲಾ ಕೆಡುಹಲು ಬ್ರಹ್ಮನು ಒಡ್ಡಿದ ಬಲೆಯಂತೆ ಆ ಮೋಹನ ಮೂರ್ತಿಯನ್ನು ಕಂಡು, ನಟ್ಟ ದೃಷ್ಟಿಯನ್ನು ತೆಗೆಯಲು ತಿಳಿಯದೇ ಸೋತು ಕೀಚಕನು ಪಾಪವನ್ನು ನೆನೆದನು.

೬) ನಾಚಿಕೆಯೆಂಬುದು ಹಾರಿಹೋಯಿತು. ತನ್ನ ಘನತೆ ಗಾಂಭೀರ್ಯಗಳೊಂದನ್ನು ಗಮನಿಸದೇ ದ್ರುಪದಳನ್ನು ತನ್ನ ಕಣ್ಣಿನಿಂದಲೇ ನುಂಗಿ ಕಣ್ಣಿನಿಂದಲೇ ನೋಡುತ್ತಾ ರಾಣಿಯನ್ನು ಕುರಿತು, ಅಕ್ಕಾ! ನಿನ್ನ ಓಲೆಗಾತಿಯರನ್ನು ಮೀರಿಸಿದ ಈ ಮನೋಹರಿ ಯಾರು? ಎಂದು ಕೇಳಿಕೊಂಡನು.

೭) ಆಗ ರಾಣಿಯು ಈಕೆ ಗಂಧರ್ವ ರಮಣಿಯು. ಈಕೆಯನ್ನು ಮಾನ್ಯವೃತ್ತಿಯಲ್ಲಿ ಸಲುಹುವೆವು. ಇವಳ ಗಂಡಂದಿರು ಬಲ್ಲಿದರು. ಸಾಕು ನೀನು ಬಿಡಾರಕ್ಕೆ ಹೋಗು, ನಿನಗೆ ಇವಳು ಯೋಗ್ಯಳಲ್ಲ. ಹೀಯಾಳಿಕೆ ಮಾತನಾಡಬೇಡೆನುತ ನಿಜಾನುಜನನ್ನು ಬೀಳ್ಕೊಟ್ಟಳು.

೮) ಅವನ ಮನಸ್ಸು ಕಾಮನ ಬಾಣಕ್ಕೆ ಈಡಾಗಿ, ಮನಸ್ಸನ್ನು ಬಿಗಿಹಿಡಿಯಲಾರದೆ ಮರುದಿನ ನಸುಕಿನಲ್ಲಿ ಅರಮನೆಗೆ ಧಾವಿಸಿ ಬಂದನು. ಬಾಗಿಲಲ್ಲಿಯೇ ಸೈರಂಧ್ರಿಯು ನಿಂತಿದ್ದಳು.

೯) ತನ್ನೊಡನೆ ಬರುತ್ತಿರುವಂತಹ ಬೃಹತ್ತ ಪರಿವಾರವನ್ನು ಮತ್ತು ಹಡಪದ ಬಾಲಕನನ್ನು ಹಿಂದೆ ಕಳುಹಿಸಿ ಸಿಂಹದ ಸತಿಯಾದ ಅವಳಿಗೆ ಒಲಿದು, ನರಿಯ ಮನಸ್ಸು ಅಳಪುವಂತೆ ಗರುಡನರಸಿಯ ಕಂಡು ಆನಂದಪಟ್ಟು, ಸರ್ಪ ಬಯಸುವಂತೆ ಆ ಬಾಲಕೆಯ ಕಡೆ ಹೋದನು.

೧೦) ಸೈರಂಧ್ರಿ ನಿಲ್ಲು, ಕಾಮನ ಆಯುಧದ ಬಲು ಗಾಯ ತಾಗಿತು ನೀನೇ ಬಲ್ಲೆ ಅದಕ್ಕೆ ತಕ್ಕ ಔಷಧಿಯನ್ನು. ದಯವಿಟ್ಟು ಬದುಕಿಸಿಕೋ. ನಿನ್ನ ಚೆಲ್ಲಂಗಗಳನ್ನು ನನ್ನ ಮುಖದ ಮೇಲೆ ಚೆಲ್ಲಿ ಸಾಯುತ್ತಿರುವ ನನ್ನನ್ನು ಸಪ್ರಾಣವನ್ನಾಗಿ ಮಾಡು ಎಂದು ಕೂಗಿದನು.

೧೧) (ಎಲೆ ದುರಾತ್ಮ, ಮಹಾಪರಾಧವನ್ನು ಮಾಡಿ ನಿನ್ನಯ ಕುಲದ ಬೇರನ್ನು ಕೊಯ್ಯುವ ಕಾರ್ಯವನ್ನು ಮಾಡುವಿಯೇ? ಅದರಿಂದ ಹೆತ್ತವರಿಗೆ ಅಪವಾದ ಬರುವದಿಲ್ಲವೇ? ಬದಕನ್ನು ನಡಿಸಿಕೊಂಬುದು ಒಳ್ಳೆಯದು ಎಂದು ಹೇಳಿದಳು.)

೧೨) ಎಲೆ ಪಾತಕಿ ನಿನ್ನ ಕಣ್ಣೆಂಬ ಬಲದಿಂದ ನನ್ನದೆಯನ್ನು ನೋಯಿಸಿ ತೊಲಗಬಹುದೇ? ನಿನ್ನ ಮನಸ್ಸಿನಲ್ಲಿ ಕರುಣವಿಲ್ಲವೆ? ನಾನು ನಿನಗೆ ಒಲಿದು ಬಂದೆನು, ಕಾಮನ ಸೇವಕನು. ವೈರಿಯ ಭಯವನ್ನು ತಗ್ಗಿಸಿ ತಲೆಯನ್ನು ಕಾಯಲು ಸೂಚನೆಯೆಂದನು ಕೀಚಕನು ನಗುತ್ತ.

೧೩) ಹೀಗೆ ಕಾತರದಿಂದ ಕೆಟ್ಟಮಾತುಗಳನ್ನು ಆಡಿ ಕೆಡಬೇಡ ಸೋತರೇನದು? ಮನುಜ ಧರ್ಮವು ಚಿತ್ತ ಚಂಚಲವು. ಈ ಕ್ಷಣದಲ್ಲಿ ತಪ್ಪು ಮಾತುಗಳನ್ನು ಕೇಳಿದ ಅವರು ಸೈರಿಸುವದಿಲ್ಲ. ದೇವಸಮೂಹದಲ್ಲಿ ತನ್ನವರು ಬಲ್ಲಿದರೆಂದು ಇಂದುಮುಖಿ ನುಡಿದಳು.

೧೪) ದ್ರೌಪದಿಗೆ ಖಳನು ಎನ್ನ ಆಟೋಪವನು ನೀನು ತಿಳಿದಿಲ್ಲ. ಒಡವರ ಕೋಪ ದವಡೆಗೆ ಮೃತ್ಯುವೆಂಬಂತೆ ನಿನ್ನವರು ನನಗೇನು ಮಾಡುವರು· ನೀನು ನನ್ನೊಡನೆ ಬಂದರೆ ಸಾಕು ಪಿನಾಕಿಗೆ ತೆರಳುವೆನು ಬಳಿಕ ಇಲ್ಲಿ ನೋಡೆಂದ.

೧೫) ತನಗೆ ಸಾವು ತಪ್ಪದು. ಮತ್ತು ಕಾಮನ ಆ ಬರವು ಘನವಾದದ್ದು. ನಿನ್ನನ್ನು ಕೂಡಿಕೊಂಡೆ ಸಾಯುವೆನು. ಮತ್ತು ಅದಿಲ್ಲದೆ ನಾನು ಮದನನಿಗೆ ಒಡಲನ್ನು ಒಪ್ಪಿಸುವದಿಲ್ಲ. ನೀನು ನನ್ನ ಮೇಲೆ ಕೃಪೆಮಾಡಿ ನನ್ನ ಜೀವವನ್ನು ಉಳಿಸು ಎಂದು ನಗುನಗುತ ಖಳನು ಕೈಮುಗಿದನು.

೧೬) ಕುಲದಲ್ಲಿ ಒಬ್ಬನು ಜನಿಸಿ ವಂಶವನ್ನು ನಾಶಮಾಡಿದನೆಂಬ ದುರ್ಯಶ ಉಳಿಯುವದಲ್ಲದೆ ಒಳ್ಳೆಯದು ಕಾಣುವದಿಲ್ಲ ಬೇರೆ ಮಾತೇಕೆ ಕೊಲೆಗಡಿಕೆ. ಪಾಪಿಹೆಂಗಸೆಯೂ ಹಲವರನ್ನು ಹೊಯಿಸಿದಳೆಂದು ಸುಡಲಿ ಯೆಂದು ದುಃಖಿಸುವರು, ನಿನ್ನ ಅಖಿಳರಾಣಿಯರೆಂದಳು ಇಂದು ಮುಖಿ.

೧೭) ನೀರೆ, ನನ್ನನ್ನು ನೂಕದಿರು ನಿನಗೆ ನನ್ನ ಮನಸ್ಸು ಮಾರು ಹೋಗಿದೆ. ನೀನು ಚಿತ್ತವ ಸೂರೆಗೊಂಡು ಕೊರಳು ಹೊಯಿಸುವೆ. ಕಾರುಣ್ಯವನ್ನು ಕೈದೋರಿ ಕಮಲಾಕ್ಷಿಯೇ ನನ್ನ ಮರಣವನ್ನು ನಿಲ್ಲಿಸು ಎಂದನು.

೧೮) ನೀನು ನ್ಯಾಯವನ್ನು ಗೆಲ್ಲುವದಿಲ್ಲ. ನ್ಯಾಯವನ್ನು ಅಧಿಕವಾಗಿ ನಂಬಿದವರು ಸ್ಥಾಯಿಗಳು. ಕತ್ತಲೆಗೂ ಸೂರ್ಯನಿಗೂ ಬಹಳ ಅಂತರವಿದೆ. ಆದ್ದರಿಂದ ನಾಯಿ ಸಿಂಹಕ್ಕೆ ಇದಿರೆ ಹೋಗದೆಂದಳು ಇಂದುಮುಖಿ.

೧೯) ವಿರಹದಾಸೆಯಲ್ಲಿ ಶಪಥವು ಹೊಕ್ಕು, ಆಕೆಯ ಮಾತಿನಲ್ಲಿ ಮೊದಲ ನೋಟದಲ್ಲಿ ಅವನ ಮನದ ಸರ್ವಸ್ವವು ಸೂರೆಹೋಯಿತು. ಪ್ರಾಣವು ಸಡಿಲವಾಯಿತು. ಬುದ್ಧಿ ಕದಡಿ ಕೃಪಾಣಪಾಣಿ (ಕೈಯಲ್ಲಿ ಕತ್ತಿ ಹಿಡಿದು) ವಿರಾಟರಾಯನ ರಾಣಿಯ ಮನೆಯನ್ನು ಪ್ರವೇಶಿಸಿ ಅಕ್ಕನನ್ನು ಕಂಡನು.

೨೦) ಹಣಿಯನ್ನು ಪಾದಕ್ಕೆ ಹಚ್ಚಲು ಬಂದ ಅಣಕಿಗನನ್ನು ತೆಗೆದಪ್ಪಿ ಮದವಾರಣನೆ ಕುಳ್ಳಿರೆನ್ನುತ್ತ ಸಹೋದರನನ್ನು ನೋಡಿದಳು. ಹೆಣ ಮುಸುಡು ಬಿದ್ದಿದೆ ಕಡುಪಾಪಿ ಲತಾಂಗಿಯನ್ನು ಕೆಣಕಿದನು ವಂಶವನ್ನು ನಾಶಮಾಡುತ್ತಾನೆಂದು ಮರುಗಿದಳು.

೨೧) ಅವನ ಕಂದಿದ, ಚಿಂತಾಜಲಧಿಯಲ್ಲಿದ್ದಂತೆ ಜೊಂಪಡಗಿತು ಕುಲಶಿರೋಮಣಿ ನಿನ್ನ ಚಿತ್ತದ ನೆಲೆಯೇನು ? ಯೆಂದಾಗ ಅವನು ನಸು ನಾಚಿ ಮನ್ಮಥನ ಬಾಣ ಅವನ ಸದ್ಬುದ್ಧಿಯನ್ನು ಅವಳು ಸೀಳಿ ಹಾಕಿದಳು ಯೆಂದನು ಕೀಚಕನು ನಗುನಗುತ.

೨೨) ಬೇರೆ ಬಿನ್ನಹವೇನು; ಸತಿಯರ ನೂರುಮಡಿ ಚಲುವನ್ನು ಸೂರೆಗೊಂಡು ಅವಳಿರುವಳು ನಿನ್ನೋಲಗದ ಸತಿಯಲ್ಲಿ. ನನ್ನನ್ನು ಮದನನಿಗೆ ಮಾರಿದಳು. ಅವಳ ಉಳಿಗಕ್ಕೆ ಸಿಕ್ಕು ನಾನು ಬದುಕುವಂತಿಲ್ಲ. ನನ್ನ ಜೀವನದ ಮೇಲೆ ಆಸೆ ಇದ್ದರೆ ಸೈರೇಂದ್ರಿಯನ್ನು ನನಗೆ ಒಪ್ಪಿಸು ಎಂದನು.

೨೩) ಅವಳ ಗಂಡರು ಸುರರು. ಸುರರಿಗೆ ಮತ್ತು ನಮಗೆ ಬಹಳ ಅಂತರವಿದೆ. ಒಂದು ವೇಳೆ ಮುನಿದರೆ ಆ ದೇವತೆಗಳ ಬಲಕ್ಕೆ ಇದಿರುಂಟೆ? ಆಗ ನಮ್ಮನ್ನು ಯಾರು ಕಾಯುವವರು.? ಆದ್ದರಿಂದ ಅವಳ ತೊಡಕೆ ಬೇಡ. ಸತಿಯರ ಸಮೂಹದಲ್ಲಿ ನೀನು ಯಾರನ್ನು ಬಯಸುತ್ತೀಯೋ ಅವರನ್ನು ನಿನಗೆ ಮದುವೆ ಮಾಡುವೆನೆಂದಳು.

೨೪) ಅಕ್ಕ,ಮರಳೆ,ನನ್ನ ಚಿತ್ತ ಅವಳಲ್ಲಿ ಸೇರಿಕೊಂಡಿದೆ. ಅವಳನ್ನು ಉಳಿದವರ ವಿಚಾರ ನನಗೆ ಬೇಡ. ಮನಸ್ಸನ್ನು ಬೇರೆ ಮಾಡಿ ಅದು ಮಕ್ಕಳಾಟಿಕೆಯಾಗದಿರಲಿ. ಆದ್ದರಿಂದ ತಕ್ಕವಳಾದ ಸೈರಂಧ್ರಿಯಲ್ಲಿ ತನ್ನನ್ನು ಸೇರಿಸಬೇಕು ಎಂದನು.

೨೫) ಸೊಗಸುವೆಸಿಸದ ಮಾತುಗಳು ಕಣ್ಣುಕಾಣಿಸದಂತೆ ಮಾಡುತ್ತವೆ. ಇತರರ ಹೆಸರೆಂದರೆ ನನ್ನ ನಾಲಿಗೆಗೆ ದ್ವೇಷ. ಈ ನನ್ನ ಆಸೆಯನ್ನು

ಪೂರ್ಣಮಾಡಬೇಕೆಂದು ಮತ್ತು ಕಾಯಬೇಕೆಂದು ಪಾದಕ್ಕೆ ನಮಸ್ಕರಿಸಿದನು.

೨೬) ಈ ಮಾತನ್ನು ಕೇಳಿ ಸೈರಂಧ್ರಿಗೆ ಕಣ್ಣಲ್ಲಿ ನೀರು ಬಂದವು ತಮ್ಮನನ್ನು ಮೋಹದಿಂದ ಮೈದಡವುತ್ತ ಮೇಲಕ್ಕೆಬ್ಬಿಸಿ 'ಉಳುಭವನಕ್ಕೆ ಹೋಗು, ತರುಣಿಯನ್ನು ನಾಳೆ ಕಳುಹುತ್ತೇನೆಂದು ಕಳುಹಿದಳು ಕೀಚಕನನ್ನು ಆ ಅಬಲೆ.

೨೭) ಮನದಲ್ಲಿ ಗುಡಿಗಟ್ಟಿ, ಮಾನಿನಿಯ ಕರುಣಾಪಾಂಗರ ಸಫೆಯು ಪುಣ್ಯರು ಎಂದೆನ್ನುತ್ತ ಅಕ್ಕನನ್ನು ಬಿಳ್ಕೊಟ್ಟನು. ಮನದಲ್ಲಿರುವ ಮರುಳ ತನದ ಉಬ್ಬಿನಲ್ಲಿ ಮನೆಯನ್ನು ಪ್ರವೇಶಿಸಲು ಸೂರ್ಯ ಪಶ್ಚಿಮದಿಕ್ಕಿನಲ್ಲಿ ಮುಳುಗಿದಂತಾಯ್ತು.

೨೮) ಮತ್ತೆ ಅಂಗನೆಗೆ ಇಟ್ಟ ಚಂದನದ ತಿಲಕವೋ, ಮನ್ಮಥನ ರಾಣಿಯಾದ ರತಿಯ ಚಲುವ ಕೈಗನ್ನಡಿಯೋ, ಮದನನ ಕೀರ್ತಿಯ ರಾಶಿಯೋ, ವಿರಹದಿಂದ ಸುಡುವಕೆಂಡ ಹೊಳೆಯುತ್ತದೆಯೇನೋ ಎನ್ನುವಂತೆ ಇರಳಿನಲ್ಲಿ ಸೂರ್ಯನು ಜಗತ್ತನ್ನು ಬೆಳಗುತ್ತ ಉದಯುವಾದನು,

೨೯) ಖಳನ ವಿರಹದ ತಾಪದುರಿ ಅತಿಶಯವಾಗಿ ತನ್ನ ಅರಮನೆಗೆ ಬಂದನು. ಕವಳಿಗನು ಹಾವಿನಂತೆ ತಳಿರ ಹಾಸಿನಲಿ ಕೆಡೆದನು. ನಳಿನ ವೈರಿಯ ಸುಳಿವು ತನ್ನಯ ಕೊಲೆಗೆ ಬಂದುದೆಂದು ಪಾಪಿ ಕಮಲಜನು ಈ ಬಲವಿಲೋಚನೆಯ ಈ ಚೆಲುವಿಕೆಯನ್ನು ಮಾಡಿದನು.

೩೦) (ಕೀಚಕನು ತನ್ನ ಅರಮನೆಯಲ್ಲಿ ಅರಗಳಿಗೆ ಯುಗವಾಗಿ ಇರುಳನ್ನೆಲ್ಲಾ ಕಳೆದನು. ಉದಯಾಚಲದ ಶಿರದಲಿ ಸೂರ್ಯನು ತಲೆದೋರಿದನು. ತಾವರೆಗಳಿಗೆ ಕಾತರಲತಾಂಗಿಯ ಸವಿಯಲ್ಲ ತಾಗಿತು ಕುಮುದಿನೀ ಪತಿಗೆ.)

೩೧) ಜನಮೇಜಯ ಮಹಿಪಾಲನೆ ಕೇಳು. ಕಡುಪಾಪಿಯು ಮೃತ್ಯು ಮನೋ ಧರ್ಮವನ್ನು ಬಯಸಿದಳು. ಪಾಂಚಾಲಿಯನು ನಯವಿಹಿನೆ ಸುದೀಷ್ಣೆ ಕರೆಸಿ, ಅವಳಿಗೆ ನನ್ನ ತಮ್ಮನ ಮನೆಯಿಂದ ಮಧುವನ್ನು ತರುವಂತೆ ನಿಯಮಿಸಿದಳು.

೩೨) ಅದಕ್ಕೆ ಸೈರಂಧ್ರಿಯು "ತಮ್ಮನಲ್ಲಿಗೆ ದೇವಿ? ನಿಮ್ಮಯ ತಮ್ಮ ದುರುಳನು. ಅದರಿಂದಾಗಿ ಆತನಳಿದರೆ ಅದರ ಕೆಟ್ಟತನವು ನಮ್ಮನ್ನು

ತಾಗುವದು. ನಿಮ್ಮನ್ನು ಓಲೈಸಿ, ನಿಮಗೆ ವಿಶರ್ಪವನು ಮಾಡುವದು ನಮ್ಮ ಧರ್ಮವಲ್ಲ ಅದಕ್ಕಾಗಿ ಉಳಿದವರನ್ನು ಕಳುಹಿಸು ಎಂದಳು.

೩೩) ಆ ಸೈರಂಧ್ರಿಯ ಮಾತಿಗೆ ಭುಗಿಲೆಂದು ಕೊಪಗೊಂಡ ಸುಧೀಷ್ಣೆ, ಸುಡು, ಎತಕೆ ಈ ಗರ್ವದ ನುಡಿಗಳನ್ನಾಡುವೆ. ನಿನ್ನಿಂದ ನಮಗೇನು ಹಾನಿಯಾಗಬೇಕಾಗಿದೆ. ನನ್ನ ಅನುಜನೆಂದರೆ ಯಾರೆಂದು ತಿಳಿದಿದ್ದಿ. ಸುಮ್ಮನೆ ಹೋಗಿ ಆ ಕೆಲಸವನ್ನು ಮಾಡಿಕೊಂಡು ಬಾ ಎಂದೆ ನಲು ಅವಳು ನೃಪಾಲಯಕ್ಕೆ ಹೊರಟಳು.

೩೪) ಮನ್ಮಥನ ಮದದಾನೆ, ಕಂದರ್ಪನ (ಮನ್ಮಥ) ಮಹಾ ಮಂತ್ರಾಧಿದೇವತೆ, ಜನರನ್ನು ಮರುಳು ಗೊಳಿಸುವ ಸಂಸ್ಕೃತಿ ಸುಖದ ಸಾಕಾರೆಯಾದ, ಕಾಮನ ಮಸೆದ ಕತ್ತಿಯಂತಿರುವ, ಜನಮೋಹನ ತಿಲಕೆ ಲಾವಣ್ಯಸಾಗರದಲ್ಲಿ ಹುಟ್ಟಿದ ಲಕ್ಷ್ಮೀಲತಾಂಗಿ ಸ್ವರೂಪದಲ್ಲಿರುವ ದ್ರೌಪದಿಯು ಕೀಚಕನ ಮನೆಗೆ ಬಂದಳು.

೩೫) ಕುಡಿತೆಯಂಗಳ ಚಪಲೆ, ಉಂಗುರವಿಡಿಯನ ನಡುವಿನ ನೀರೆ, ಹಂಸೆಯನಡೆಯು ಗಮನದ ಮೌಳಿಕಾರ್ತಿ, ಕಮಲದ ಪರಿಮಳದ ಕಡುಚಲುವೆ ಬರಲು ಕೀಚಕನು ಬೆರಗಾದನು.

೩೬) ಯಾವಜನ್ಮದ ಸಕೃತ ಫಲದಿಂದ ಈ ವಧುವ ಸೇರಿದರೋ ಆ ಪತಿಗಳು ಧನ್ಯರು ಮತ್ತು ಅವರದು ಪೂರ್ವ ಜನ್ಮದ ಸುಕೃತದ ಸರ್ವಸ್ವ ವೆನ್ನುತ್ತ ಖಳರಾಯನೆದ್ದು ಬಂದನು.

೩೭) ತರುಣಿ ಬಾ! ಕುಳ್ಳಿರು ಮದಂತಃಕರಣದ ಎಡರು ಅಡಗಿತು. ಕಾಮನ ದುರುಳತನಕ್ಕೆ ನಾನಂಜುವೆನೆ ನೀನೊಬ್ಬಳೆ ನನಗೆ ಬಲವಾದರೆ ಸಾಕು. ಇಂದುವಿಗೆ, ಮಧುಕರನಿಗೆ, ಕೋಗಿಲೆಗೆ ಬಿರುದು ಕಟ್ಟುವೆನು ಎಂದು ಖಳ ಅಬ್ಬರಿಸಿ ನುಡಿಯಲು ಕೋಪಗೊಂಡ ಇಂದುಮುಖಿ ನುಡಿದಳು.

೩೮) ಬಾಯಿ ಹುಳುವುದು ನೋಡಿ ಮಾತನಾಡು. ನಾಯಿತನವನು ಬಿಡು ಎಲವೊ ಕೀಚಕ ವಿರಾಟನ ಅರಸಿ ಕಳುಹಿದೆನೆಂದು ಬಂದೆನು. ಈಮಧುವ ಕೊಂಡಯ್ಯುವೆನು. ಸಾಯಲೇ ಬೇಕಾಗಿದ್ದರೆ ಹಸಿದ ಶೂಲವ ಹಾಯಿ

ಹೋಗೇಳು ಎನ್ನಲಾಗಿ ಕೀಚಕನು ನಗುತ್ತ ನಿನ್ನ ಬೈಗಳು ನನ್ನನ್ನ ನೋಯಿಸುವವೇ? ಎಂದು ತುಡುಕಿದನು.

೩೯) ಆತನ ಮಾತಿಗೆ ಅವಳು ಕರಗಳನ್ನು ಮುರಿದಳು. ಒಟ್ಟಿಲೆ ಧರೆಗೆ ಈಡಾಡಿದಳು. ನೊಗವನ್ನು ತಿರುಹಿ ಭಯದಲ್ಲಿ ನಡುಗಿ ಬಾಗಿಲ ದಾಟಿ, ಬೆಟ್ಟ ಪೊಳೆಯ ಜಘನದ ಭರದಿ ಬಡನಡು ಮುರಿಯದೆ ಎಂಬಂತೆ ತರಳೆ ಹಾಯ್ದು ರಭಸದಿ ಸಭೆಗೆ ಓಡಿದಳು.

೪೦) ಆದರೆ ಖಳನು ಒಡನೆಯೇ ಬೆಂಬತ್ತಿದನು. ಆಕೆಯ ತುರು ಬನ್ನು ಹಿಡಿದು ದಾಸಿಯಮಗಳೆ,ಹಾಯ್ದರೆ ಬಿಡುವನೆ? ಎನ್ನುತ್ತ ಕಾಲಿನಿಂದ ಒಡೆಮೆಟ್ಟಿ ಹೊಯ್ದನು. ಆಗ ಸೈರಂಧ್ರಿ ರಕ್ತವನು ಕಾರಿ ಹುಡಿಯಲಿ ಮುಡಿ ಹೊರಳಿ ಬಿರುಗಾಳಿಗೆ ಸೈಗೆಡದೆ ಕದಳೀ ಕಂಬದಂತೆ ಒರಗಿದಳು.

15 ೪೧) (ಶಿವ ಶಿವಾ! ನನ್ನ ಪತಿಗಳು ಪಾಪಿಗಳು. ಒಬ್ಬರಾದರೂ ನನ್ನ ರಕ್ಷಣೆಗೆ ಬರಬಾರದೇ; ನಾಲ್ವರ ನಡುವೆ ಬಿದ್ದ ಹಾವು ಸಾಯದೆಂದು ಹೇಳುತ್ತಾರೆ. ನನ್ನನ್ನು ಈ ನೀಚನು ತುಂಬಿದ ಈ ಸಭೆಯಲ್ಲಿ ಎಷ್ಟು ಸಂಕಟಪಡಿಸುತ್ತಿರುವನಲ್ಲಾ! ಈ ಸಭೆಯೆಂಬುದು ಘೋರಾರಣ್ಯವೇ ಸರಿ ಎಂದಳು.)

೪೨) ತನ್ನ ಸತಿಯು ನೊಂದಳೆಂದು ಮನದಲ್ಲಿನೊಂದು, ಮೋರೆ ಯನ್ನು ಬಿಗಿದು ಸಿಟ್ಟಿನಿಂದ ಕುದಿದು ಮೈಮುರಿದು ರೋಷದಲ್ಲಿ ಜನರು ಅರಿಯದಂತೆ ಕುಚೇಷ್ಟೆಯಲ್ಲಿನೊಂದು ಮೆಲ್ಲನೆ ಸಭಾಂಗಣದ ಎದುರಿಗಿದ್ದ ಮರವನ್ನು ಕೆಕ್ಕರಿಸಿ ನೋಡಿದನು.

೪೩) ಈತನ ಇಂಗಿತವ ಅರಿತು ಧರ್ಮನು ಸಾಂಕೇತಿಕವಾಗಿ ಉತ್ತರ ವಿತ್ತನು. ವಲಲ ಸೈರಿಸು, ಸೈರಿಸು. ಈ ತರುವ (ಗಿಡ) ಮುರಿಯದಿರು. ಸುಜನ ಸಮೂಹಕ್ಕೆ ಇದುಆಶ್ರಯವು. ಊರ ಹೊರಗೆ ಮಹಾತಿಶಯದ ಮರ ವುಂಟು. ಅದನ್ನು ನಿನ್ನ ಬಾಣಸಿನ ಮನೆಗೆ ಬಳಸಬಹುದು.

೪೪) ಧರ್ಮಮಯವಾದ ಈ ತರುವನ್ನೇ ಮೊದಲು ಮುರಿವೆನು ಎಂಬಂತೆ ಅಸಹಾಯಕನಾಗಿ ಭೀಮನು ದುಗುಡದಿಂದ ಓಲಗದಿಂದ ಎದ್ದು ಹೋದನು. ಇದು ನಿನ್ನ ಪೂರ್ವಾರ್ಜಿತ ಕರ್ಮಫಲ. ಈ ಕೀಚಕನನ್ನು

ಶಿಕ್ಷಿಸುವ ಶಕ್ತಿ ಈ ಸಭೆಗಿಲ್ಲ. ಆದ್ದರಿಂದ ನೀನು ಮೌನವಾಗಿ ಮನೆಗೆ ಹಿಂದುರುಗುವದು.

೪೫) ನೀರು ಹೊರಗಿಕ್ಕುವದು ಮೂರೇಬಾರಿ, ಬಳಿಕ ಅದು ಸೈರಿಸದು. ನನ್ನ ಸೈರಣೆಗೆ ಅವಧಿಯು ಮೀರಿವೆ. ನನ್ನವರ ಪೌರುಷ ಬಂಜೆಯಾಯಿತು. ಯೆಂದುನೊಂದು ದ್ರೌಪದಿಯು ಅಲ್ಲಿಂದ ಜಾರಬೇಕೆಂದಳು.

೪೬) ಅಬ್ಬಾ! ಈ ಹೆಂಗಸು ಎಷ್ಟು ಗಟ್ಟಿಗಳು! ಮಹಾರಾಜರ ಇದುರಿನಲ್ಲಿ ಇಷ್ಟು ಬಾಯ್ಬಡಿಕತನವೆ? ಗರತಿಯಾದವಳಿಗೆ ಇದು ಗೌರವವೇ? ಎಂದು ಆತನು ಛೀಗುಟ್ಟಿದನು. ಈ ಹಿರಿಯರೆನಿಸಿಕೊಂಡವರಲ್ಲಿ ಗೋಳು ಹೇಳಿಕೊಂಡು ಎನೂ ಹುರುಳಿಲ್ಲವೆಂದುಕೊಂಡು ದ್ರೌಪದಿಯು ವಾಯುಪುತ್ರನನ್ನು (ಭೀಮ)ನನ್ನು ಶರಣು ಹೋಗಬೇಕೆಂದು ನಿಶ್ಚಯಿಸಿ ಆಕೆ ಅಲ್ಲಿಂದ ಹೊರಟಳು.

೪೭) ಆಗ ಸುದೇಷ್ಣೆಯು ಮನೆಗೆ ಬರಲು ತಂಗೀ, ಮುಖದ ವಿಳಾಸ ವಳಿದಿದೆ, ಮುಗುಡವಿದೇನು? ಎಂದು ನುಡಿದಾಗ ಅದನ್ನು ಕೇಳಿ ಕೆರಳಿದ ದ್ರೌಪದಿಯು ಇದೆಂತಹ ಅರಸುತನದ ಅಟ್ಟಹಾಸ ನಿಮ್ಮದು? ನೀವು ಮಾಡಿದುದು ನಿಮಗೆ ಜ್ಞಾಪಕವಿಲ್ಲವೇ? ನಮ್ಮನ್ನು ನೀವು ಅಪಹಾಸ್ಯ ಮಾಡುವಿರೆಂದು ದ್ರೌಪದಿಯು ಒಡತಿಗೆ ನುಡಿದಳು.

೪೮) ಅವಳ ಗಡಸು ಧ್ವನಿಯನ್ನು ಕೇಳಿ ಹೆದರಿದ ಸುದೇಷ್ಣೆ ಅಮ್ಮ, ತಪ್ಪಿತಸ್ಥನು ತಮ್ಮನಾದರೂ ಪರಸ್ತ್ರೀ ಕಾಮುಕನಾದ ಪಾಪಿಯಾದ ಮೇಲೆ ಪರಮ ಶತ್ರು ಇದ್ದಂತೆಯೇ ಸರಿ. ಅವನಿಗೆ ಮರಣದಂಡನೆ ವಿಧಿಸುತ್ತೇನೆ ಯೆಂದು ಸಮಾಧಾನ ಹೇಳಲು ಪ್ರಯತ್ನಿಸಿದಳು. ಆದರೂ ದ್ರೌಪದಿಯು ಕಟುವಾಗಿ ಉತ್ತರವಿತ್ತಳು—ಕೊಲ್ಲಿಸುವ ಕಷ್ಟ ನಿಮಗೇಕೆ ತಾಯಿ? ನನ್ನ ಪತಿಗಳಿದ್ದಾರೆ; ಅವರು ಕೀಚಕನ ವಂಶವನ್ನು ಸವರಿ ಹಾಕಲು ಸಮರ್ಥರಾಗಿದ್ದಾರೆ. ಇದನ್ನು ಮೊದಲೇ ಸಾರಿದ್ದೇನೆ.

೪೯) ಎಂದು ಬೀಳ್ಕೊಂಡು ಆ ಅಬಲೆಯು ತನ್ನ ಮನೆಗೆ ಹೊರಟು ಬಂದು, ಮನದಲ್ಲಿ ದುಃಖಪಟ್ಟು ಕುದಿದಳು. ಆತ್ಮಘಾತಕ, ಮಹಾಪಾತಕ. ಇಲ್ಲಿ ಬಾಳಿ ಬದುಕುವದು ಬಹಳ ಕಷ್ಟವೆಂದು ವನಿತೆ ಮರುಗಿದಳು.

೫೦) ಹಿರಿಯ ಗಂಡನಾದ ಧರ್ಮರಾಯನಿಗೆ ಧರ್ಮದ ಗ್ರ
ಬಡೆದಿದೆ. ಅರ್ಜುನನಿಗೆ ಅಣ್ಣನಾಜ್ಞೆಯ ಭ್ರಮ. ನಕುಲ ಸಹದೇವ
ಅಸಮರ್ಥರು. ಈ ನಾಯಿಯನ್ನು ಕೊಲ್ಲಲು ಇವರೆಲ್ಲರೂ ಅಕ್ಷಮ
(ಅಸಮರ್ಥರು) ಯನ್ನವಲ್ಲಿ ನಿಸ್ಸಂದೇಹವೆಂದಳು ತನ್ನೊಳಗೆ.

೫೧) ಎಲ್ಲರಲ್ಲಿಯೂ ಮಿಡುಕುಳ್ಳ ಗಂಡನೆಂದರೆ ಕಲಿಭೀಮಸೇ
ನನ್ನ ಹಾನಿಬಿಂಕೆ ನಿಲ್ಲದೆ ಅಂಗೈಸುವನು. ಈ ಪಾಪ ಕೀಚಕನ ಉಪಟ
ವನ್ನು ಅದ್ಯಂತವಾಗಿ ವಿವರಿಸಿದರೆ ಆತನು ಕೆರಳಿದರೂ ಕೆರಳಬಹುದ
ಅಲ್ಲಿಯೂ ಹುರುಳುಗಾಣದಿದ್ದರೆ ಘೋರ ವಿಷವೆ ನನಗೆ ಗತಿ ಎಂದಳು.

೫೨) ಹೀಗೆಂದುಕೊಂಡು ದ್ರೌಪದಿಯು ಆ ದಿನ ಇರುಳಿನ
ಭೀಮನನ್ನು ಅರಸುತ್ತ ಒಲಿದು, ಮೇಲುದು ನೂರೆ ನಡುಗುವ ಮೊಲೆ
ಭರದಲಿ ಅಡಿಯಿಡುತ ಕಳವಳದ ಕರಣದ ಮುಗ್ಧ ಭರದಲ್ಲಿ ಅಡಿಯಿಡುತ
ಬಾಣಸಿಗನ ಮನಗೆ ಬಂದಳು.

೫೩ ಭೀಮನು ಈ ಬಾಣಸಿಗನ ವಿದ್ಯೆಯಲ್ಲಿ ಯೋಗ್ಯನು.
ಭೀಮನಂತಹ ವ್ಯಕ್ತಿ ಅಡುಗೆಯ ಬಂಟನಾಗುವ ನೆಂದರೆ ವಿಧಿ ಎಂತಹ
ಕಠೋರವಾದುದೋ! ಈ ತನ್ನ ದುರವಸ್ಥೆಯಲ್ಲಿಯೂ ಆಕೆಯು ನಸುನಗುತ್ತ
ನಿದ್ರೆಯಲ್ಲಿ ನಿರತನಾದ ಭೀಮನನ್ನು ಅಧೈರ್ಯದಿಂದ ಹೊದ್ದಿದಳು,

೫೪) ಬಾಣಸಿನ ಮನೆಯಲ್ಲಿ ಮಲಗಿರ್ದ ಭೀಮಸೇನನನ್ನು ಎಬ್ಬಿ
ಸಲು ಆತನೆಲ್ಲಿ ಭುಗಿಲೆಂಬನೊ ಎಂದು ಭಯಪಟ್ಟಳು. ಮತ್ತೆ
ಮೋರೆಯ ಮಬ್ಬಿಗೆಯೊಂದು ಸಂತೈಸುವನೋ ಸಾವಕಾಶವಾಗಿ ಎಬ್ಬಿಸಿ
ನೋಡುವೆನು ಎನುತ್ತ ಭೀಮಸೇನನ ಹತ್ತಿರ ಹೋದಳು.

೫೫) ಮೆಲ್ಲಮೆಲ್ಲನೆ ಮುಸುಕನ್ನು ಸಡಲಿಸಿ, ಗಲ್ಲವನ್ನು ಹಿಡಿದು
ಅಲುಗಲು ಅಪ್ರತಿಮ ಮಲ್ಲನು ಪಾಂಚಾಲನಂದನೆಯ ನೋಡಿ 'ಬರವ
ಕಾಯಿಸು ಲತಾಂಗಿ ? ಮುಖದಲ್ಲಿ ತಲ್ಲಣವೇಕೆ ತೋರುತ್ತಿದೆ' ಎಂದು
ಕೇಳಿದನು.

೫೬) ಕೀಚಕನು ರಾಜ ಸಭೆಯಲ್ಲಿ ನಿನ್ನ ಜನರಿದಿರು ಒದೆದನು.
ನಿನ್ನಂಥಹ ಗಂಡನಿದ್ದೂ ನನಗೆ ಇಂಥಹ ಪರಿಭವವೇ? ಈ ಕೀಚಕ ಬೇ

ನನ್ನ ಬೆನ್ನು ಬಿಡುವಂತಿಲ್ಲ. ನಾನಂತೂ ಖಂಡಿತ ಬದುಕುವದಿಲ್ಲ. ಇದ ರಿಂದಾದ ಪಾಪಕ್ಕೆ ನೀನೆ ಹೊಣೆ ಎಂದಳು. ಅವಳ ಮಾತು ಕೇಳಿ ಭೀಮನು ರೇಗಿ ಹೋದನು.

೫೭) ಆದರೆ ಭೀಮನು ಇದನ್ನು ತನ್ನ ಮುಂದೆ ಉಸರಿ ಪ್ರಯೋ-ಜನವೇನು ? ನಿನಗೆ ನಾನೊಬ್ಬನೆ ಗಂಡನಲ್ಲ, ಇನ್ನು ನಾಲ್ಕು ಜನರಿದ್ದಾರೆ ಆ ಸಾಹಸಿಗಳಾದ ನಾಲ್ವರ ಮುಂದೆ ಹೇಳು ಹೊಗೆಂದನು.

೫೮) ಆ ಮಹರಾಯ ಧರ್ಮರಾಯ ನನಗೆ ಸ್ವಲ್ಪವೂ ಅವಕಾಶ ಕೊಡುವಂತಿಲ್ಲ. ನಕುಲ ಸಹದೇವರು ಕೈಯೊಳಗಿನಿಸುವರು. ಗೆದ್ದಕೊಟ್ಟರೂ ಸಹ ದೋಷ ಹೊದ್ದುವದೇನು ತಪ್ಪುವ ಹಾಗಿಲ್ಲ. ಆದ್ದರಿಂದ ನಿನ್ನ ತೊಡಕೆ ಬೇಡವೆಂದು ಹೇಳಿದನು.

೫೯) ಅಂದು ದುಶ್ಯಾಸನನ ಕರುಳು ಬಗೆದು ಹಾಕುವದಕ್ಕೆ ಹೊರಟಾಗ ಹಲ್ಲು ಹಲ್ಲು ಗಿರಿದು ಅದನ್ನು ನಿಲ್ಲಿಸಿದ. ಇಂದು ಕೀಚಕ ನಾಯಿಯನ್ನು ಒರಸಿ ಹಾಕೋಣವೆಂದರೆ ಬೇಡವೆಂದು ನಿವಾರಿಸಿದ. ಆದನ್ನು ನೀನು ಪ್ರತ್ಯಕ್ಷವಾಗಿಯೇ ನೋಡಿದ್ದಿ. ಇನ್ನು ನನಗೆ ಇಲ್ಲವೇ ಅಪವಾದ ವೆಂದನು.

೬೦) ಒಬ್ಬ ಹೆಣ್ಣಿಗೋಸ್ಕರವೆ ಅಣ್ಣನ ಮಾತನ್ನು ಮೀರಿದ ಕುಂತಿಯ ಮಗನೆಂದು ಲೋಕವು ನನ್ನನ್ನು ನಿಂದಿಸಬೇಕೇನು, ನಾನು ಆತನ ಆಜ್ಞೆಯೆಂಬ ಕಟ್ಟಿಗೆ ಸಿಕ್ಕುಬಿದ್ದಿದ್ದೇನೆ ಕಾಂತೆ ಕೇಳೆಂದ.

೬೧) ಗಂಡ ಗರ್ವದ ನುಡಿಯನ್ನು ನುಡಿದು ನಾವು ಭಂಡತನದಲ್ಲಿ ಬದುಕಲೊಲ್ಲೆವು. ಧರ್ಮನಿರ್ಮವನ್ನು ತೆಗೆದುಕೊಂಡು ಚಿಗುರುವರಲ್ಲ. ಕೀಚಕನನ್ನು ಸಂಹಾರ ಮಾಡುವಲ್ಲಿ ಅರ್ಜುನ ರಾಯನನ್ನು ಪೀಡಿಸು ಯೆಂದನು.

೬೨) ತರುಣಿ, ಇನ್ನು ಮೇಲೆ ನಿನಗೆ ನಾಲ್ಕೇ ಗಂಡರೆಂದು ತಿಳಿದುಕೋ ನನ್ನನ್ನು ಮರೆತುಬಿಡು. ನೀನು ಅರ್ಜುನ ನಕುಲ ಸಹದೇವ ಮತ್ತು ಧರ್ಮರಾಯನಿಗೆ ಪ್ರಾರ್ಥಿಸಿಕೊ, ನನ್ನಲ್ಲಿ ಫಲಸಿದ್ಧಿಯಿಲ್ಲವೆಂದನು.

೬೩) ಭೀಮಸೇನನ ಮಾತುಗಳನ್ನು ಕೇಳುತ್ತಿದ್ದಂತೆಯೇ ಕೊರಳು ಸಲೆಸಿಕ್ಕು, ದುಃಖ ಒತ್ತರಿಸಿ ಬಂದಿತು. ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿ

ದಳು. ಬೆಂಕಿ ತಗುಲಿದ ಬಾಳೆಯಂತೆ ಮಮ್ಮಲ ಮರುಗಿ ಕಣ್ಣೀರಿಸಲ್ಲಿ ಆ ಹೆಣ್ಣು ತೊಯ್ದು ಹೋದಳು.

೭೪) ಹುಟ್ಟಿದುದು ಪಾಂಚಾಲರಾಜನ ಮಗಳಾಗಿ, ಕೈಹಿಡಿದುದು ದೇವತೆಗಳನ್ನು ಅಲ್ಲಗಳೆಯಬಲ್ಲ ಪಾಂಡುಪುತ್ರರನ್ನು, ತನ್ನ ಪಾಲಿಗೆ ಬಂದುದು ವಿರಾಟ ವನಿತೆಯರಿಗೆ ತುರುಬು ಕಟ್ಟುವ, ಕಾಲು ಒತ್ತುವ ಸೇವಾ ವೃತ್ತಿಯೆಂದಳು.

(೭೫) ಹಗೆಗಳಿಗೆ ಒಳ್ಳೆಯದಾಗಿ ಬದುಕುವ ಮುಗ್ಧರಿಗೆ ಇನ್ನಾರುಂಟು. ಭಂಗಕೆ ಹೆಗಲು ಕೊಟ್ಟವರಿಗೆ ವಿರೋಧಿಗಳುಂಟೆ ಈ ಲೋಕದಲ್ಲಿ ? ಶೂರನೆನ್ನುವ ಬಿರುದನ್ನು ಬಿಟ್ಟು ಓಡಿಹೋಗುವ ಪಾಂಡವರಂತೆ ಮೂಕರು ಇನ್ನಾರುಂಟೆಂದು ಹಲುಬಿದಳು.)

೭೬) ಕಾಲನಿಯಮ ತೊಡಕಿದರೆ ತನ್ನವರೆನ್ನುವಳೊಬ್ಬಳನ್ನು ನೀವು ಆಳಲಾರಿರಿ. ಪಾಪಿಗಳು ನೀವು ! ನಿಮಗೇಕೆ ಭೂಮಿಪಾಲ ವಂಶ? ನೀವು ಕೂಳುಗೇಡಿಗಳಾಗಿ ಒಡಲನ್ನು ಹೊರುವಿರಿ ಎಂದಳು ಇಂದುಮುಖಿ.

೭೭) ಧರೆಯ ಭಂಡಾರವನ್ನು ಪುರವನ್ನು ಕರಿ, ತುರುಗ, ರಥ,ದಳವನ್ನು ಕುರುಕುಲ ಶ್ರೇಷ್ಠಗಳಾದ ಕೌರವರು ಸೆಳೆದುಕೊಂಡರು. ನೀವು ಹೊರಬಂದು ಕೀಚಕನಿಗೆ ನನ್ನನ್ನು ಕೊಟ್ಟರಿ. ಇದು ನಿಮಗೆ ಲೇಸಲ್ಲ ಎಂದಳು ಅಂಬುಜಾಕ್ಷಿ.

೭೮) ಬಲಭೀಮನೆ. ನನಗೆ ಸಾಯಲು ಅಪ್ಪಣೆಯನ್ನು ಕೊಟ್ಟಯಷ್ಟೇ; ಆಯಿತು, ನೀವು ನಿಮ್ಮಣ್ಣನ ಆಜ್ಞೆಯಲ್ಲಿ ವಿರಾಮವಾಗಿ ಬದುಕಿರಿ, ನಾನು ಬಂದು ಕಟುವಾಗಿ ನುಡಿದುದನ್ನು ಕ್ಷಮಿಸು. ಎಂದು ಚರಣಕ್ಕೆ ಎರಗಿದಳು.

೭೯) ದ್ರೌಪದಿಯ ಈ ಮಾತನ್ನು ಕೇಳಿ ಭೀಮ ಕಂಬನಿದುಂಬಿದನು. ಅಂತಃಕರಣ ಕಡುನೆನೆಯಿತು. ತನುಪುಳುಕು ಉಬ್ಬರಿಸಿ ಮೆಲ್ಲನೆ ವನಿತೆಯನ್ನು ಬಿಗಿದಪ್ಪಿದನು. ರೋಷದ ಘನತೆ ಹೆಚ್ಚಿ ಹಗೆಗಳನ್ನು ಮನದಲ್ಲಿಯೇ ಹಿಂಡಿದನು. ಆಗ ಆಕೆಯ ಕಂಬನಿಯನ್ನು ತನ್ನ ಸೆರಗಿನಿಂದ ತೊಡೆದನು.

೭೦) ಕುರುಳು ನೇವರಿಸಿದನು. ಗಲ್ಲವನ್ನು ಒರಸಿ ಮುಂಡಾಡಿದನು. ಆ ಸುಂದರ ಮೂರ್ತಿಯನ್ನು ಕಾಣುತ್ತ ಅವನು ಕ್ರೋಧದಿಂದ ಮೈಮರೆತು "ಎಲೈ ಸುಂದರಿ, ಇನ್ನು ನಿನ್ನ ಭಯವನ್ನು ದೂರವಿಡು: ಇಗೋ ಅಣ್ಣ ಹಾಕಿದ ಗೆರೆಯನ್ನು ದಾಟಿ ಬಿಟ್ಟಿದ್ದೇನೆ." ಎಂದನು ಭೀಮನು.

೭೧) ಹೋಗು, ಕೀಚಕನ ಹುಟ್ಟಡಗಿಸುತ್ತೇನೆ ನಸುಮಿಸಿರೆದೊಡೆ ವಿರಾಟ ವಂಶದ ಹೆಸರು ತೊಡವೆನು ಒಂದು ವೇಳೆ ನಮ್ಮ ಅಜ್ಞಾತವಾಸ ಅರಿದೊಡೆ ಅವರನ್ನೆಲ್ಲಾ ಜೂರು ಜೂರು ಮಾಡಿಬಿಡುತ್ತೇನೆ. ಈ ನನ್ನ ಪ್ರತಿಜ್ಞೆಗೆ ಧರ್ಮಪ್ರತಿಜ್ಞೆಗೆ ಕೃಷ್ಣರು ಮೊದಲಾಗಿ ಯಾರೇ ಅಡ್ಡ ಬಂದರೂ ಅವರನ್ನೂ ಮೀರಿ ನಡೆವೆನು.

೭೨) ಒಂದು ವೇಳೆ ಮುನಿದರೆ ಇನ್ನು ನನ್ನ ಅಣ್ಣ ತಮ್ಮಂದಿರಾರನ್ನೂ ನಾನು ಲಕ್ಷಿಸುವದಿಲ್ಲ. ಸ್ವತಃ ಕೃಷ್ಣನೆ ಅಡ್ಡ ಬಂದರೂ ನಾನು ಲಕ್ಷಿಸುವದಿಲ್ಲವೆಂದನು.

೭೩) (ಈಸುದಿನ ನಮ್ಮಣ್ಣನ ಪಾಶದಲ್ಲಿ ಸಿಕ್ಕಿದ್ದೆ. ಆದರಿಂದಾಗಿ ಸಿಂಹದ ಕೂಸನ್ನು ನರಿಯು ಕೆಣಕಿದಂತಾಗಿತ್ತು ಈಗ ಈ ನಾಯಿಗಳ ಸೇಡನ್ನು ಬಡ್ಡಿ ಸಹಿತ ತೀರಿಸಿಕೊಳ್ಳುವೆನು. ಪಾಪಿ ಧರ್ಮದ ಮೇರೆ ತಪ್ಪಿತು ಕಾಂತೆ ಕೇಳೆಂದನು.)

೭೪) ಇದೋ ಕೀಚಕ ಕೌರವೇಂದ್ರರ ಹರಣಕೆ ಸಂಚಾಕಾರ ನಿನ್ನಯ ಹರಿಬ ಇನ್ನು ನನ್ನದು. ನಾಯಿ ಕೀಚಕನು ನಾಟ್ಯ ಮಂದಿರದಲ್ಲಿ ನಿನ್ನನ್ನು ಕಾಣಬೇಕೆಂದು ಸಾಂಕೇತಿಕವಾಗಿ ಸೂಚಿಸು ಎಂದನು.

೭೫) ನೀನು ಅವನನ್ನು ಅಲ್ಲಿಗೆ ಬರಿಸು, ನಾನು ಅಲ್ಲಿಯೇ ಮರೆಯಾಗಿದ್ದು ಆ ಖಳನ ಉದರದಿಂದ ರಕ್ತವನ್ನು ಚೆಲ್ಲಿ ಅವನ ಬಸುರನ್ನು ಬಗೆದು ಶಾಕಿನಿಯರಿಗೆ ತೃಪ್ತಿಪಡಿಸುತ್ತೇನೆ. ನಾನು ಮುಂದಿನ ನಾಟಕದ ಪರಿಹಾರ ನೋಡಿಕೊಳ್ಳುತ್ತೇನೆ ಎಂದು ಅಂಗನೆಯನ್ನು ಸಂತೈಸಿ ಬೀಳ್ಕೊಟ್ಟನು.

೭೬) ಸೈರಂಧ್ರಿಯು ಹರುಷದಲಿ ಹೆಚ್ಚಿದಳು, ಭೀಮನು ಪುರುಷರ ಪುರುಷನಲ್ಲವೆ-ಎಂದು ಉಬ್ಬಿದಳು. ನನ್ನ ಪರಮ ಸುಕೃತದಿಂದ ನೀನು

ದಳು. ಬೆಂಕಿ ತಗುಲಿದ ಬಾಳೆಯಂತೆ ಮಮ್ಮಲ ಮರುಗಿ ಕಣ್ಣೀರಿನಲ್ಲಿ ಆ ಹೆಣ್ಣು ತೊಯ್ದು ಹೋದಳು.

೬೪) ಹುಟ್ಟಿದುದು ಪಾಂಚಾಲರಾಜನ ಮಗಳಾಗಿ, ಕೈಹಿಡಿದುದು ದೇವತೆಗಳನ್ನು ಅಲ್ಲಗಳೆಯಬಲ್ಲ ಪಾಂಡುಪುತ್ರರನ್ನು, ತನ್ನ ಪಾಲಿಗೆ ಬಂದುದು ವಿರಾಟ ವನಿತೆಯರಿಗೆ ತುರುಬು ಕಟ್ಟುವ, ಕಾಲು ಒತ್ತುವ ಸೇವಾ ವೃತ್ತಿಯೆಂದಳು.

೬೫) ಹಗೆಗಳಿಗೆ ಒಳ್ಳೆಯದಾಗಿ ಬದುಕುವ ಮುಗ್ಧರಿಗೆ ಇನ್ನಾರುಂಟು. ಭಂಗಕೆ ಹೆಗಲು ಕೊಟ್ಟವರಿಗೆ ವಿರೋಧಿಗಳುಂಟೆ ಈ ಲೋಕದಲ್ಲಿ? ಶೂರನೆನ್ನುವ ಬಿರುದನ್ನು ಬಿಟ್ಟು ಓಡಿಹೋಗುವ ಪಾಂಡವರಂತೆ ಮೂಕರು ಇನ್ನಾರುಂಟೆಂದು ಹಲ್ಲುಬಿದಳು.

೬೬) ಕಾಲನಿಯಮ ತೊಡಕಿದರೆ ತನ್ನವರೆನ್ನುವಳೊಬ್ಬಳನ್ನು ನೀವು ಆಳಲಾರಿರಿ. ಪಾಪಿಗಳು ನೀವು! ನಿಮಗೇಕೆ ಭೂಮಿಪಾಲ ವಂಶ? ನೀವು ಕೂಳುಗೇಡಿಗಳಾಗಿ ಒಡಲನ್ನು ಹೊರುವಿರಿ ಎಂದಳು ಇಂದುಮುಖಿ.

೬೭) ಧರೆಯ ಭಂಡಾರವನ್ನು ಪುರವನ್ನು ಕರಿ, ತುರುಗ, ರಥ,ದಳ, ವನ್ನು ಕುರುಕುಲ ಶ್ರೇಷ್ಠಗಳಾದ ಕೌರವರು ಸೆಳೆದುಕೊಂಡರು. ನೀವು ಹೊರಬಂದು ಕೀಚಕನಿಗೆ ನನ್ನನ್ನು ಕೊಟ್ಟಿರಿ. ಇದು ನಿಮಗೆ ಲೇಸಲ್ಲ ಎಂದಳು ಅಂಬುಜಾಕ್ಷಿ.

೬೮) ಬಲಭೀಮನೆ. ನನಗೆ ಸಾಯಲು ಅಪ್ಪಣೆಯನ್ನು ಕೊಟ್ಟಿಯಷ್ಟೇ; ಆಯಿತು, ನೀವು ನಿಮ್ಮಣ್ಣನ ಆಜ್ಞೆಯಲ್ಲಿ ವಿರಾಮವಾಗಿ ಬದುಕಿರಿ, ನಾನು ಬಂದು ಕಟುವಾಗಿ ನುಡಿದುದನ್ನು ಕ್ಷಮಿಸು. ಎಂದು ಚರಣಕ್ಕೆ ಎರಗಿದಳು.

೬೯) ದ್ರೌಪದಿಯ ಈ ಮಾತನ್ನು ಕೇಳಿ ಭೀಮ ಕಂಬನಿದುಂಬಿದನು. ಅಂತಃಕರಣ ಕಡುನೆನೆಯಿತು. ತನುಪುಳುಕು ಉಬ್ಬರಿಸಿ ಮೆಲ್ಲನೆ ವನಿತೆಯನ್ನು ಬಿಗಿದಪ್ಪಿದನು. ರೋಷದ ಘನತೆ ಹೆಚ್ಚಿ ಹಗೆಗಳನ್ನು ಮನದಲ್ಲಿಯೇ ಹಿಂಡಿದನು. ಆಗ ಆಕೆಯ ಕಂಬನಿಯನ್ನು ತನ್ನ ಸೆರಗಿನಿಂದ ತೊಡೆದನು.

೭೦) ಕುರುಳು ನೇವರಿಸಿದನು. ಗಲ್ಲವನ್ನು ಒರಸಿ ಮುಂಡಾಡಿದನು. ಆ ಸುಂದರ ಮೂರ್ತಿಯನ್ನು ಕಾಣುತ್ತ ಅವನು ಕ್ರೋಧದಿಂದ ಮೈಮರೆತು "ಎಲೈ ಸುಂದರಿ, ಇನ್ನು ನಿನ್ನ ಭಯವನ್ನು ದೂರವಿಡು: ಇಗೋ ಅಣ್ಣ ಹಾಕಿದ ಗೆರೆಯನ್ನು ದಾಟಿ ಬಿಟ್ಟಿದ್ದೇನೆ." ಎಂದನು ಭೀಮನು.

೭೧) ಹೋಗು, ಕೀಚಕನ ಹುಟ್ಟಡಗಿಸುತ್ತೇನೆ ನಸುಮಿಸಿರೆದೊಡೆ ವಿರಾಟ ವಂಶದ ಹೆಸರು ತೊಡವೆನು ಒಂದು ವೇಳೆ ನಮ್ಮನಜ್ಞಾತವಾಸ ಅರಿದೊಡೆ ಅವರನ್ನೆಲ್ಲಾ ಚೂರು ಚೂರು ಮಾಡಿಬಿಡುತ್ತೆನೆ. ಈ ನನ್ನ ಪ್ರತಿಜ್ಞೆಗೆ ಧರ್ಮಪ್ರತಿಜ್ಞೆಗೆ ಕೃಷ್ಣರು ಮೊದಲಾಗಿ ಯಾರೇ ಅಡ್ಡ ಬಂದರೂ ಅವರನ್ನೂ ಮೀರಿ ನಡೆವೆನು.

೭೨) ಒಂದು ವೇಳೆ ಮುನಿದರೆ ಇನ್ನು ನನ್ನ ಅಣ್ಣ ತಮ್ಮಂದಿರಾರನ್ನೂ ನಾನು ಲಕ್ಷಿಸುವದಿಲ್ಲ. ಸ್ವತಃ ಕೃಷ್ಣನೆ ಅಡ್ಡ ಬಂದರೂ ನಾನು ಲಕ್ಷಿಸುವದಿಲ್ಲವೆಂದನು.

೭೩) ಈಸುದಿನ ನಮ್ಮಣ್ಣನ ಪಾಶದಲ್ಲಿ ಸಿಕ್ಕಿದ್ದೆ. ಆದರಿಂದಾಗಿ ಸಿಂಹದ ಕೂಸನ್ನು ನರಿಯು ಕೆಣಕಿದಂತಾಗಿತ್ತು ಈಗ ಈ ನಾಯಿಗಳ ಸೇಡನ್ನು ಬಡ್ಡಿ ಸಹಿತ ತೀರಿಸಿಕೊಳ್ಳುವೆನು. ವಾಸಿ ಧರ್ಮದ ಮೇರೆ ತಪ್ಪಿತು ಕಾಂತೆ ಕೇಳೆಂದನು.

೭೪) ಇದೋ ಕೀಚಕ ಕೌರವೇಂದ್ರರ ಹರಣಕೆ ಸಂಚಾಕಾರ ನಿನ್ನಯ ಹರಿಬ ಇನ್ನು ನನ್ನದು. ನಾಯಿ ಕೀಚಕನು ನಾಟ್ಯ ಮಂದಿರದಲ್ಲಿ ನಿನ್ನನ್ನು ಕಾಣಬೇಕೆಂದು ಸಾಂಕೇತಿಕವಾಗಿ ಸೂಚಿಸು ಎಂದನು.

೭೫) ನೀನು ಅವನನ್ನು ಅಲ್ಲಿಗೆ ಬರಿಸು, ನಾನು ಅಲ್ಲಿಯೇ ಮರೆಯಾಗಿದ್ದು ಆ ಖಳನ ಉದರದಿಂದ ರಕ್ತವನ್ನು ಚೆಲ್ಲಿ ಅವನ ಬಸುರನ್ನು ಬಗೆದು ಶಾಕಿನಿಯರಿಗೆ ತೃಪ್ತಿಪಡಿಸುತ್ತೇನೆ. ನಾನು ಮುಂದಿನ ನಾಟಕದ ಪರಿಹಾರ ನೋಡಿಕೊಳ್ಳುತ್ತೇನೆ ಎಂದು ಅಂಗನೆಯನ್ನು ಸಂತೈಸಿ ಬೀಳ್ಕೊಟ್ಟನು.

೭೬) ಸೈರಂಧ್ರಿಯು ಹರುಷದಲಿ ಹೆಚ್ಚಿದಳು, ಭೀಮನು ಪುರುಷರ ಪುರುಷನಲ್ಲವೆ–ಎಂದು ಉಬ್ಬಿದಳು. ನನ್ನ ಪರಮ ಸುಕೃತದಿಂದ ನೀನು

ನನಗೆ ಪತಿಯಾಗಿ ದೊರೆತೆ' ಎಂದು ಆತನನ್ನು ಹೊಗಳಿ ಬೀಳು ಕೊಂಡಳು. ಆಗ ಇರುಳು ಕಳೆದು ಬೆಳಗಾಗಿತ್ತು.

೭೭) ದಿನದಂತೆ ಆ ದಿಸವು ಕೀಚಕನು ಅರಮನೆಗೆ ಹೊರಟವನು ದಾರಿಯಲ್ಲಿ ವೃಕೋದರ ವಲ್ಲಭೆಯನ್ನು ಕಂಡನು. ಹಿಂದಿನ ಅನುಭವ ದಿಂದ ಅವನನ್ನು ಕೈ ಮುಂದೆ ಮಾಡದಂತೆ ಅಂಜಿಸಿತ್ತು ಆದ್ದರಿಂದ ದೂರ ದಿಂದಲೇ 'ಸುಂದರಿಯೇ ಹಿಂದಿನ ರಾತ್ರಿಯಲ್ಲಿ ಒಂದು ಯುಗದಂತೆ ಕಾಲ ಕಳೆದುದಾಯಿತು. ಮನ್ಮಥನು ನನ್ನ ಪಾಲಿಗೆ ಯಮನಾಗಿ ಬಿಟ್ಟಿ ದ್ದಾನೆ. ನೀನೇ ಅದನ್ನು ಬಲ್ಲೆಯೆಂದನು ಕೀಚಕನು ನಗುತ್ತ-

೭೮) ಆದಕ್ಕೆ ಉತ್ತರವಾಗಿ ದ್ರೌಪದಿ 'ಅದು ಹಾಗೆಯೇ ಸರಿ ಪರಸತಿಗೆ ಅಳುಪಿದಲ್ಲಿ ಮನ್ಮಥನು ಯಮನಾಗುತ್ತಾನೆ. ಅಮೃತ ವಿಷ ವಾಗುತ್ತದೆ. ಆಲಿಕಲ್ಲುಗಳು ಬಿಸಿಯಾಗುತ್ತವೆ. ಬಂಧು ಬಾಂಧವರು ವೈರಿಗಳಾಗುತ್ತಾರೆ ಪಾಪಿಯಾದ ಅವನನ್ನು ಹೊರಲು ಭೂಮಾತೆ ಕೂಡಾ ಹೇಸುತ್ತಾಳೆ. 'ಪಾಪ ಕೀಚಕ' ಎಂದಳಿಂದು ಮುಖೀ.

೭೯) ನನ್ನವರಿಗೆನಾದರೂ ಗೊತ್ತಾದರೆ ನಿನ್ನ ವಂಶವನ್ನು ಸವರಿ ಹಾಕಿ ಬಿಡುವರು. ಯಾರಿಗೂ ಗೊತ್ತಾಗದಂತೆ ಇಂದು ಸಂಜೆ ನಾಟ್ಯ ಗರುಡಿಯಲ್ಲಿ ಅಡಗಿರು. ನಿನಗೆ ಆಯುಷ್ಯ ನೆರೆದುದು ಕತ್ತಲೆಯ ಮನೆ ಯೊಳಗೆ ನಾನೊಬ್ಬಳೆ ಬರುತ್ತೇನೆ ಎಂದಳು ಇಂದು ಮುಖಿ.

೮೦) ಸೈರಂಧ್ರಿಯ ಮಾತನ್ನು ಕೇಳಿ ಕೀಚಕನು ಉಬ್ಬಿಹೋಗಿ ಹಸಾದವ ಹಾಯ್ಕಿ ಹೋದನು. ಇತ್ತ ನಳಿನ ಮುಖಿ ತನ್ನ ಕಣ್ಣುಗಳನ್ನೇ ಕೈದೀವಿಗೆಯಾಗಿ ಮಾಡಿಕೊಂಡು ಬಾಣಸಿಗನ ಮನೆಗೆ ಬಂದಳು.

೮೧) ಅವಳು ಬಾಣಸಿಗನ ಮನೆಗೆ ಬಂದು "ಭೀಮ, ನಾನು ಆ ಮದಾಂಧನಿಗೆ ನುಡಿದು ಬಂದಿರುವೆನು. ನೀನು ನಾಟ್ಯ ನಿಲಯದಲ್ಲಿ ನಿಲ್ಲು ವದು. ತಾಮಸವ ಮಾಡದಿರು. ಅಲ್ಪ ಬುದ್ಧಿಯನ್ನು ಹೂಡದಿರು ಕಾಮುಕನನ್ನು ನೆಡೆಗೆಡುಹಿ ನಿಜ ಸುಪ್ರೇಮವನ್ನು ತೋರು' ಎಂದು ಮಲ್ಲ ಗಂಟೆಯಲಿ ಘೋಳಿಟ್ಟಳು.

೮೨) 'ಖಳನ ಮುರಿ' ಯೆಂದು ಅಬಲೆಯುನೊಸಲು ತಿಲಕವ ರಚಿಸಿ ದಳು. ಭೀಮನು ನಾಟ್ಯ ನಿಳಯ ಮಧ್ಯದ ಮಣಿಯ ಮಂಚದ ಮೇಲೆ

ಸವಡಿಸಿದ ಕೀಚಕನು ಕೃತಾಂತನ ಬಾಯಲ್ಲಿ ಹೋಗುವಂತೆ ನಾಟ್ಯ ನಿಳ ಯದ ಬಾಗಿಲನ್ನು ಪ್ರವೇಶಿಸಿದನು.

೭೩) ಉರಿವ ಮಾರಿಯ ಬೇಟೆಗಾತನು ತುರುಬಿನಲ್ಲಿ ಮಲ್ಲಿಗೆಯ ಮೊಗ್ಗನ್ನು ಮುಡಿದುಕೊಂಡನು, ಅನಂತರ ವಯ್ಯಾರದಿಂದ ಸುರಗಿಯನ್ನು (ಕತ್ತಿ) ತಿರುವುತ್ತ ನಾಟ್ಯ ಗೃಹವನ್ನು ಸೇರಿ ಕತ್ತಲಲ್ಲಿ ತಡವರಿಸುತ್ತ ಮಂಚದ ಬಳಿಗೆ ಹೋದನು.

೭೪) ಕಾಲ ಪಾಶದಿಂದ ಎಳಿಸಿಕೊಂಬ ಕರಾಳ ಮತಿಯು ಕೃತಾಂತನ ಬಾಯಿಯಲ್ಲಿ ಪ್ರವೇಶಿಸುವಂತೆ ಆ ನಾಟ್ಯ ಶಾಲೆಯನ್ನು ಪ್ರವೇಶಿಸಿದನು. ಮೇಲೆ ಏನನ್ನೂ ಗಮನಿಸದೆ ಸಂತೋಷದಿಂದ ಮಂಚವಿದ್ದೆಡೆ ತಡವರಿಸಿ ಹೊಕ್ಕನು.

೭೫) 'ವನಜಮುಖಿ ಇಗೋ ಪುಷ್ಪ ತಾಂಬೂಲಗಳನ್ನು ತೆಗೆದುಕೋ ಚಿತ್ತೈಸು ನಿನಗೆ ಅನುರೂಪನಾದವನೆಂದರೆ ನಾನೇನು. ದೇವತೆಗಳಲ್ಲಿ ನನ್ನಂಥ ಚಲುವರಾರಿದ್ದಾರೆ ಸೈರಂಧ್ರಿ ಕೇಳೆಂದ.

೭೬) ಅಹಾ ಈ ಜಗತ್ತಿನಲ್ಲಿ ನನಗೆ ಸೋಲದ ಪುರುಷರೇ ಇಲ್ಲ ನನಗೆ ಸಮಾನವೆಂದರೆ ನೀನೇ ಸರಿ ಆದಕ್ಕಾಗಿ ನಿನಗೆ ಒಲಿದು, ಬಂದೆನು ನನ್ನ ಹೆಣ್ಣುತನವನ್ನು ಯಥೇಚ್ಛವಾಗಿ ಅನುಭವಿಸುವವನಾಗು ಎಂದನು. ಆಗ ಹರ್ಷದಿಂದ ಉಬ್ಬಿದ ಕೀಚಕನು ಅನಿಲಜನ ಮೈದಡುವುತ್ತ ಸ್ತನವನ್ನು ಕಾಣದೆ ಹೆದರಿ ಅವನು ನಗುತ್ತ ಹೀಗೆ ನುಡಿದನು.

೭೭) ಎಲೆಗೆ ಇದೇನು ಇಂಥಹ ಕಲುಮೈಯಾದೆ, ಮಾಯಾ ವೇಷವ ಧರಿಸಿದೆಯೋ ? ಎನ್ನಲಾಗಿ ಸ್ತ್ರೀವೇಷಿ ಭೀಮನು 'ಕೇಳೆಲವೊ ಪರಸತಿಗೆ ಅಳುಪಿದಾತನಿಗೆ ಅಮೃತವು ವಿಷವು. ಕೋಮಲತೆಯು ಕರ್ಕಶವಾಗುವದು' ಎನುತ ಮಂದಮತಿಯನ್ನು ತುಡುಕಿದನು.

೭೮) ಛೀ ಚಪಲೆ ಹೆಣ್ಣೆ, ಹೋಗಾಚೆ ಎಂದು ಅವನು ನಿವಾರಿಸುತ್ತಿದ್ದಂತೆಯೇ ಭೀಮನು ಅವನ ಜುಟ್ಟನ್ನು ಹಿಡಿದು ಕೆಳಗೆ ಜಗ್ಗಿದನು. ಇಷ್ಟಾಗುವದರಲ್ಲಿ ಕೀಚಕನಿಗೆ ಅಲ್ಲಿರುವವಳು ಹೆಣ್ಣಲ್ಲವೆಂದು ಅರ್ಥವಾಗಿ

ಹೋಯಿತು. ಈ ಕುಚೋದ್ಯಕ್ಕೆ ತೊಡಗಿದ ನೀಚನ ಕೊರಳನ್ನು ಬಗೆದು ಹಾಕಬೇಕೆಂದು ಅವನ ಮೇಲೆ ಬಿದ್ದನು.

೮೯) ಆದರೂ ಭೀಮನ ಹೊಡೆತಗಳಿಗೆ ಕೀಚಕನು ತತ್ತರಿಸಿ ಹೋದನು. ಭೀಮನು ಒಮ್ಮೆ ತಿವಿದೊಡನೆಯೇ ಇವನ ಎದೆ ಜರ್ಝರಿತ ವಾಯಿತು. ಕರುಳುಗಳನ್ನು ಕಾರಿಕೊಂಡು ಕೆಳಕ್ಕೆ ಬಿದ್ದನು. ಕ್ಷಣ ಮಾತ್ರದಲ್ಲಿ ಅವನ ಪ್ರಾಣ ಹಾರಿಹೋಯಿತು.

೯೦) ಭೀಮಸೇನನು ಸತ್ತವನ ತಲೆಯನ್ನು ಎದೆಯೊಳಕ್ಕೆ ಒತ್ತಿ ಕಾಲುಗಳನ್ನು ಹೊಟ್ಟೆಯೊಳಕ್ಕೆ ತುರುಕಿ ಬಳಿಕ ಅಲ್ಲಿಂದ ದೂರಕ್ಕೆ ಬಂದು ಸಮೀಪದಲ್ಲಿಯೇ ದ್ರೌಪದಿಗೆ ಯಮನ ಕೋಣ ತುಳಿದಂತೆ ಜಜ್ಜಿ ಬಿದ್ದಿದ್ದ ಆ ಕಾಮುಕನ ಹೆಣವನ್ನು ತೋರಿಸಿದಾಗ ಅವಳು ನಗುತ್ತ ನಗುತ್ತ ತೆಕ್ಕೈಸಿದಳು ಗಂಡನನ್ನು.

೯೧) ಭೀಮನು ಅತ್ತ ಹೋಗಲು ದ್ರೌಪದಿಯು ಕಾವಲಿನವರನ್ನು ಕೂಗಿ ಕರೆದು ನೋಡಿ ನಾನು ಬೇಡವೆಂದರೂ ಇವನು ಬಲಾತ್ಕರಿಸಿ ದನು. ಅದಕ್ಕಾಗಿ ನನ್ನ ಪತಿಗಳು ಅವನನ್ನು ಬಲಿ ಹಾಕಿದ್ದಾರೆ. ಎಂದು ಹೇಳಿದಳು.

೯೨) ಅವರು ಕೈದೀವಟಿಕೆಗಳ ಬೆಳಕಿನಲ್ಲಿ ಕಾಡಕನ ಭಯಂಕರ ವಾದ ಮರಣವನ್ನು ಕಂಡು ಓಡಿಹೋಗಿ ಅವನ ತಮ್ಮಂದಿರಾದ ಉಪ ಕೀಚಕನಿಗೆ ಹೇಳಿದಾಗ ಅತ್ಯಂತ ದುಃಖದಿಂದ ಸೋದರರು ಹೆಣದ ಬಳಿಗೆ ಬಂದು ಅದನ್ನು ಕಂಡು ದುಃಖಪಟ್ಟರು.

೯೩) 'ಇವಳಿಗೋಸುಗ ನಮ್ಮ ಅಣ್ಣನು ಅಳಿದನೇ' ಎಂದು ಗೋಳಾಡಿ ಆ ನಡು ರಾತ್ರಿಯಲ್ಲಿಯೇ ಅವರು ವಿರಾಟನ ಬಳಿ ಹೋಗಿ ತಮ್ಮ ಅಣ್ಣನ ದುರವಸ್ಥೆಯನ್ನು ತಿಳಿಸಿದರು. ಅವನೊಡನೆ ಸೈರಂಧ್ರಿ ಯನ್ನು ಸುಟ್ಟು ಹಾಕಲು ರಾಜಾಜ್ಞೆಯನ್ನು ಪಡೆದು ಮರಳಿ ಕಮಲ ಲೋಚನೆಯನ್ನು ಹಿಡಿದರು.

೯೪) ಆನಂತರ ಹೆಣವನ್ನು ಮಂಚಕ್ಕೆ ಕಟ್ಟಿ, ಅದರ ಕಾಲ್ದೆಸೆಗೆ ದ್ರೌಪದಿಯನ್ನು ಮಂಚದ ಕಾಲಿಗೆ ಬಿಗಿದರು. ಆಗ ದ್ರೌಪದಿಯು ಅಯ್ಯೋ ಪಾಪಿಗಳಿರಾ ಗಂಧರ್ವರಿರಾ ಎಂದು ಹಲುಬಿದಳು.

೯೫) ಕೇಳು ಅಯ್ಯೋ ವಿಜಯ ಸೇನನೆ, ವಿಜಯ ಜಯಾಬ್ಧಿ ಸೇನನೆ ಕೇಳು ಜಯ ಸೇನನೆ, ದುರಾತ್ಮಕರೆನ್ನೆಳದೊಯ್ದು ಜೀವ ಸಹಿತ ಬೆಂಕಿಯಲ್ಲಿ ಹಾಕುತ್ತಾರೆ ನೀವಿದನ್ನು ಕೇಳಿ ತಡಮಾಡದಿರಿ ಎಂಬ ಸತಿಯ ಆಕ್ರಂದನ ಧ್ವನಿಯನ್ನು ಕಲಿಭೀಮನು ಕೇಳಿದನು

೯೬) ಈ ದುರಾತ್ಮನ ಅಣ್ಣನನ್ನು ಕೊಂದಂತೆ ಈ ಕುನ್ನಿಗಳನ್ನು ಈ ಕ್ಷಣಕ್ಕೆ ಸಂಹರಿಸಬೇಕೆಂದು ಮಾರುತಿಯು ರುದ್ರಭೂಮಿಗೆ ಧಾವಿಸಿ ಹೆಮ್ಮರವನ್ನು ಮುರಿದನು.

೯೭) ಹೆಮ್ಮರದಿಂದ ಅವಿಲ್ಲರನ್ನು ಒಂದೇ ಬಾರಿಗೆ ಬೆಂಬತ್ತಿ ಕೊಂದು ಹಾಕಿದನು. ಆ ನಂತರ ದ್ರೌಪದಿಯನ್ನು ಬಂಧನದಿಂದ ಬಿಡುಗಡೆ ಮಾಡಿ ಬಾಣಸಿನ ಮನೆಯನ್ನು ಪ್ರವೇಶಿಸಿದನು.

೯೮) ಊರತುಂಬ ಈ ಸುದ್ದಿಯು ಹಬ್ಬಲು ಜನರು ತಮ್ಮ ತಮ್ಮೊಳಗೆ ಮಾತನಾಡುತ್ತಿರಲಾಗಿ ನಳಿನ ಮುಖಿಯು ನಸುನಗುತ ತಿಳಿಗೊಳವನ್ನು ಹೊಕ್ಕು ಸ್ನಾನ ಮಾಡಿ ಬೀದಿಯೊಳಗೆ ಬರುತ್ತಿರಲಾಗಿ ಅಖಿಳ ಜನ ಅವಳಿಗೆ ಕೈ ಮುಗಿದರು.

೯೯) ಈಕೆಗೋಸ್ಕರವೆ ಅಯ್ಯೋ ಅವಿವೇಕಿ ಕೀಚಕ ಸತ್ತದ್ದು ನಮಗೇಕೆ ಈ ಚಿಂತೆ ಶಿವ ಶಿವಯೆಂದರು ಕೆಲವರು. ಆ ಮಂದಿಯ ಮಧ್ಯದಲ್ಲಿ ಬರುತ್ತಿರುವಾಗ ಲೋಕೈಕ ವೀರನನ್ನು ಬಾಣಸಿನ ಬಾಗಿಲಲಿ ಕಂಡಳು.

೧೦೦) ಮುಗುಳು ನಗೆಯಲ್ಲಿ ಕಡೆಗಣ್ ನೋಟದಲ್ಲಿ ಶೂರನಾದ ಭೀಮನಿಗೆ 'ಗಂಧರ್ವ' ಪತಿಗೆ ನಮೋ ನಮೋ ಎನುತ ಹರ್ಷದಿಂದ ಮನೆಗೆ ಬಂದಾಗ ಸೂರ್ಯನು ಉದಯ ಪರ್ವತವನ್ನು ಏರಿದನು.

೧೦೧ ಆ ವೇಳೆಗೆ ವಿರಾಟನರಸಿಯಿಂದ ಕರೆ ಬಂದಿತು. ದ್ರೌಪದಿಯು ಆಕೆಯ ಹತ್ತಿರ ಹೋಗಲು ಮಹಾತಾಯೆ ನಿನ್ನನ್ನು ಕಂಡರೆ ನಮಗೆ ಭಯವಾಗುತ್ತದೆ. ನಮ್ಮ ಊರಿನಲ್ಲಿರುವದು ಭಯಂಕರವಾಗಿದೆ. ನಮ್ಮನ್ನು ಜೀವ ಸಹಿತ ಬಿಟ್ಟು ನಿನ್ನ ಮನಸ್ಸು ಬಂದಲ್ಲಿ ಹೋಗು ಎಂದಳು.

೧೦೩) ದೇವಿಯೆ, ನಮ್ಮದೇನು ಅಪರಾಧ? ನಿಮ್ಮ ತಮ್ಮನು ತಪ್ಪಿ ನಡೆದಸಲುವಾಗಿ ನಮ್ಮ ಪತಿಗಳು ಅದನ್ನು ಸೈರಿಸದೇ ಅವನನ್ನು ನೀಳಿ ಹಾಕಿದರು. ನಿಮ್ಮ ಮನೆಯಲ್ಲಿ ಇದ್ದು ಎರಡು ಬಗೆಯುವವರಲ್ಲ. ದುಷ್ಟರು ತಮ್ಮ ಕಾರಣದಲ್ಲಿ ತಾವು ಕೆಟ್ಟು ನೀತಿ ಬಾಹಿರರಾದರು,

೧೦೪) ಅಳುಕುದಿರಿ, ಹದಿಮೂರು ದಿವಸವ ಕಳೆದಬಳಿಕ ಎಲ್ಲರಿಗೂ ಲೇಸಾಗುವದು. ನಾವು ಕಲಹದವರಲ್ಲ, ದುಷ್ಟರಾದವರು ಹೋದರು. ಎನುತ ಸುದೀಷ್ಣೆಯನ್ನು ಸಂತೈಸಿ ನಿಜನಿಳಯವನು ಸಾರಿದಳು. ಗಳಿಗಳಿಗೆಗೆ ಕೀಚಕನ ವೃತ್ತಾಂತ ದಿಕ್ಕು ದಿಕ್ಕಿಗೆ ಹಬ್ಬಿತು.

## ೪. ದಾಳಿಯಿಟ್ಟನು ತೆಂಕ ದಿಕ್ಕಿನಲ್ಲಿ.

೧) ಕೇಳು ಜನಮೇಜಯ ಧರಿತ್ರೀಪಾಲ, ಕೌರವ ದೂತರು ಅವನಿಯ ಮೇಲೆ ತೊಳಲಿ ಅರಸಿ ಕಾಣದೆ, ಕಾಲಸನೆಯಲು ನಾಲ್ಕು ದಿಕ್ಕುಗಳಿಂದ ಬಂದ ಚರರು ತಮ್ಮ ತಮ್ಮ ವಾರ್ತೆಯನ್ನು ನಿವೇದಿಸಿದರು.

೨) ಅಮರಾವತಿಯೊಳಗೆ ಮತ್ತು ನಮ್ಮ ಭೂಮಂಡಲದೊಳಗೆ ಪಾಂಡವರ ಸುಳುವಿಲ್ಲ. ಪ್ರಭು, ಕುಂತಿ ಕುಮಾರರ ಸಲುವಾಗಿ ನಾನಾ ಗತಿಯೊಳಗೆ ಹೊಕ್ಕಿರ್ದೆವು. ಭೂಪತಿಯೇ ಕೇಳು ನಿನ್ನ ವೈರಿಗಳು ನಿರ್ನಾಮರಾದರು. ಎಂದನು.

೩) ಒಂದೇ ವಾರ್ತೆಯಿದೆ, ಜೀಯ, ಕೀಚಕನ ವೃಂದವನು ಗಂಧರ್ವರ್ಕೈವರು ಕೊಂದು ಹೋದರು, ಹಿಂದೆ ರಾವಣನಿಗಾದ ಗತಿ ಇಂದು ಕೀಚಕನಿಗಾಯಿತೆಂದು ಒಂದು ನಿಮಿಷ ಮೌನವಾಗಿರ್ದು ಕೌರವನು ಬೆರಗಾದನು.

೪) ಹೇಳು, ಇನ್ನೊಮ್ಮೆ ಹೇಳು ಸುಭಟರು ಮತ್ಸ್ಯನ ತೋಳು ಮುರಿಯಲಾಗಿ ಕೀಚಕನು ಸಂಹಾರನಾದನೇ, ಗಂಧರ್ವರು ಇರಿದರೇ ಮೇಲಿನ ಗಂಧರ್ವರು ಬಂದು ಕೀಚಕನನ್ನು ಕೊಂದರು ಎಂಬ ಮಾತು ಹೋಲದು. ಇದು ಹುಸಿಯಾಗಿರಬೇಕೆಂದು ಭೂಪನು ಮುಖವನ್ನು ತಿರುಗಿಸಿದನು.

೫) ಅಹುದು ಜೀಯಾ ಅವಧರಿಸು ದಿವಿಜರ (ದೇವತೆಗಳ ಮಹಿಳೆ) ಓಲೈಸಿದಳು. ಬಳಿಕ ಆಕೆಯು ಓಲಗದಲ್ಲಿ ಸತಿ ಇರಲು ಕುಹಿಕೆ ಕಂಡಳು ಪಿಡರ ನಾಟ್ಯದ ಗೃಹಕ್ಕೆ ಸೂಚನೆಯನ್ನು ಕೊಟ್ಟು ನಿಮಿಷದಲ್ಲಿ ಅವರು ಅಖಿಳ ಕೀಚಕರ ಸಂಹಾರ ಮಾಡಿದರು.

೬) ಅವನಿಪತಿ ಕರಪಲ್ಲವವನಿಟ್ಟು ಅವಳು ದ್ರೌಪದಿಯೇ ಇರಬೇಕು ಕೀಚಕ ಖಳನನ್ನು ಕೊಂದವನು ಭೀಮನೇ ಇರಬೇಕು. ವಿರಾಟ ಓಲಗದತ್ತ ಅಲಿದು ಪಾಂಡವರ ಕೃತ್ರಿಮ ಮಲತ್ರ ಯಾರವೆಂದು ತಿಳಿದು ಕೊಳ್ಳಿರಿಯೆಂದನು.

೭) (ಪರಿಮಳದ ಕದ್ದು ಓಡುವ ಅನಿಲನ ಹರಿವ ಹೆಜ್ಜೆಯನ್ನು ಪತ್ತೆ ಹಚ್ಚಲು ಮಧುಕರನೇ ಬೇಕು. ಕೌರವನ ಮಂತ್ರಿಗಳು ಪಾಂಡವರನ್ನು ಪತ್ತೆ ಹಚ್ಚಿದ ಅರಸನನ್ನು ಕೊಂಡಾಡಿದರು.)

೮) ಆರಿಯಾದ ವಿರಾಟನ ಪುರಕ್ಕೆ ಮುತ್ತಿಗೆ ಹಾಕಿ, ಅಲ್ಲಿಯ ತುರುಗಳನ್ನು (ದನಗಳನ್ನು) ಸೆರೆಹಿಡಿಸಿದರೆ, ಅಲ್ಲಿ ಪಾಂಡವರಿದ್ದರೆ ಧರ್ಮದ ಮೇರೆ ಮರ್ಯಾದೆಗಳನ್ನು ಬಲ್ಲ ಅವರು ತುರುಗಳ ರಕ್ಷಣೆಗಾಗಿ ಅಂಗೈಸುವರು. ಆಗ ನಾವು ಅವರನ್ನು ಅರಿತುಕೊಳ್ಳಬಹುದು. ಬಳಿಕ ಮತ್ತೆ ಹದಿಮೂರು ವರ್ಷ ವನವಾಸಕ್ಕೆ ವೀಳೆವ ಕೊಡಬಹುದು ಎಂದನು.

೯) ಒಳ್ಳೆಯದು ನಿರ್ದಿಷ್ಟವಾಗಿ ನಮ್ಮೆಲ್ಲರ ಅಭಿಮತವಿದೆ. ವೈರಿಗಳ ವಿದ್ಯೆಯನ್ನು ತಿಳಿಯುವ ಉಪಾಯಕ್ಕೆ ಬೇರೆ ಮತವಿಲ್ಲ. ಅಲ್ಲಿ ಪಾಂಡವರಿರುವದು ನಿಶ್ಚಯ. ದೇಶದ ಸಿರಿ ಮತ್ತು ಸೊಂಪು ಮತ್ತೆಲ್ಲಿಯೂ ಹಿರಿದಿಲ್ಲ ನಿಶ್ಚಯವೆಂದನು ಕರ್ಣ.

೧೦) ಗುರುವಿಗರು ಅಭಿಮತವಹರೆ. ಕೃಪ ಮುಖದಿರುಹದಿದ್ದರೆ, ಭೀಷ್ಮನು ಮನದಲ್ಲಿ ಮುರಿಯದಿದ್ದರೆ ಗುರು ಕುಮಾರನ ಬುದ್ಧಿಗೆ ಸೇರುವರೆ ವರ ಶಕುನಿ ಅಹುದೆಂದು, ಈ ಸೋದರರು ತಪ್ಪಿಲ್ಲದೆಂದಾರೆ ಅರಸನು ಮಾಡುವದೇ ಮಂತ್ರವೆಂದನು ಸುಶರ್ಮನು.

೧೧) ಮತ ಅಹುದು ತಪ್ಪಲ್ಲ. ಪಾಂಡವರ ಗತಿಯನ್ನು ಅರಿಯುವಲ್ಲಿ ಇದು ಒಳ್ಳೆಯ ಮಾರ್ಗ. ನಿರ್ಮಲ ನೀತಿಕಾರರ ಬುದ್ಧಿಗೆ ಮನೆ

ಇದು. ಅತಿಗಳಿತವಾಯ್ತು ಅವಧಿ. ದಿವಸ ಸ್ಥಿತಿಗಳು ಐದಾರೆಗೆ ಬಳಿಕ ಪಾಂಡವರೆ ಅಧಿಕಾರಿಗಳೆಂದನು ಭೀಷ್ಮನು.

೧೨) ಆ ಮತ್ಸ್ಯನ ನಾಡಿನೊಳಗೆ ಬೀಡು ನಡೆಯಲಿ ರಾಜಧಾನಿಯಲ್ಲಿ ದೂತರು ಕೂಡೆಸಾರಲಿ ಮತ್ತೆ ಕರೆಯಲಿ. ಅಕ್ಷೋಹಿಣಿ ನಾಯಕರು ಜೋಡಿಸಲಿ ಗುಡಿಗಟ್ಟ ಪೆಂಡೆಯ ಬಂಡಿಯು ಹೊರಡಲಿ ಎಂದು ನಾಡು ಬಿಟ್ಟಗಳನ್ನು ಕೌರವನು ನೇಮಿಸಿದನು.

೧೩) ಮರುದಿವಸ ಸನ್ಮುಹೂರ್ತದಲ್ಲಿ ಅರಸನು ಓಲಗದಿಂದ ಸುಶರ್ಮಾದಿಗಳ ಸಮೂಹದಲ್ಲಿ ಹೊರಹೊರಟನು. ಭೀಷ್ಮಾಚಾರ್ಯ, ಕರ್ಣ, ಕೃಪ, ಅಶ್ವತ್ಥಾಮ ಮುಂತಾದ ಮಹಾಪ್ರಧಾನರು, ಆನೆ, ಕುದುರೆ ರಥ ಮುಂತಾದ ಸಮೂಹದಲ್ಲಿ ಹೊರಹೊರಟರು.

೧೪) ಆರತಿಯನ್ನು ಎತ್ತಿದರು. ಬಳಿಕ ಉಪ್ಪಾರತಿಯನ್ನು ನೂಸಿದರು. ಘನಮದವಾದ ಆನೆಯ ಗದ್ದುಗೆಯ ಮೇಲೆ ಕುಳಿತಿರಲು ಭಟರು ಕೌರವನ ಬಿರುದನ್ನು ಸಾರುತ್ತ ಜೈಜಯಕಾರ ಮಾಡಿದರು.

೧೫) ಆಕಾಶ ಮತ್ತು ಭೂಮಿ ನಡುಗಿತು. ಆಕಾಶದಲ್ಲಿ ತಾರೆಗಳು ಕಾಣಿಸಹತ್ತಿದವು. ದಿಗುವಳಯದಲಿ ಧೂಮಕೇತುಗಳು ಕಾಣಿಸಿದವು ಭೂತಕೋಟಿಗಳು ವಿಶಾಲವಾಗಿ ಕಾಣಹತ್ತಲು ಹಸ್ತಿನಾಪುರಕ್ಕೆ ಹೊರ ಹೊರಟನು.

೧೬) ಎರಡು ಗುಂಪುಗಳಾಗಿ ತೆಂಕದಿಕ್ಕಿನ ಕಡೆಗೆ ಹರಿದು ದನಗಳನ್ನು ತಡೆಯಲಾಗಿ ಒಂದು ಕಡೆ ಕೌರವನೇ ಅಧಿಪತಿಯಾಗಿ ಮತ್ತೊಂದು ಕಡೆಗೆ ಅಧಿಪತಿಯಾದ ಸುಶರ್ಮನು ಕಳಿಸುವೆನೆಂದು, ಹುರಿಯೊಡೆದು ಹದಿನಾರು ಸಾವಿರ ಮಹಾರಥ ಸಮೂಹದಲ್ಲಿ ಸುಶರ್ಮನು ತೆಂಕದಿಕ್ಕಿನಲ್ಲಿ ದಾಳಿ ಯಿಟ್ಟನು.

೧೭) ಕೃಷ್ಣಪಕ್ಷಾಷ್ಟಮಿಯದಿನ ನೋಡಿಕೊಂಡು ವಿರಾಟನ ಪಶುಸಮೂಹವನ್ನು ಮುತ್ತಿದರು. ಗೋಪಾಲಕರನ್ನು ಕೆಡಹಿದರು. ಗೋವುಗಳ ಹಿಂಡುಗಳು ದೆಸೆದೆಸೆಗೆ ಸೀವರಿಸಿ ಓಡಿದವು ನಿಮಿಷದ ಅಂಬಾರವು ಮಸಗಿ ಕಳವಳವಾಯಿತು.

೧೮) ಆಳು ಸುತ್ತಲೂ ಕಟ್ಟಿ ದನಗಳನ್ನು ಸೆರೆಹಿಡಿದರು. ಬೊಬ್ಬಿರಿದು ಗೋಪಾಲಕರು ಕಾದಿದರು. ಕಡಿಖಂಡಮಯವಾಗಿರಲು ಮೇಲೆ ಮೇಲೆ ಬಲಶಾಲಿ ಮತ್ತು ಕುದುರೆಯನ್ನು ಕಂಡು ತಮಗೆ ಈ ಕಾಳವು ನೂಕಲಾಗವೆಂದು ಉಳಿದ ಗೋಪಾಲಕರು ತಿರುಗಿ ಹೋದರ.

೧೯) ಮುಸುಕು, ಕಂಬಳಿಗೋಲ, ಕಲ್ಲಿನಿಂದ ಬಿಸುಟಗಾಯದಿಂದ ಗೋಪಾಲಕರು ಗಾಯಗೊಂಡು ತಲ್ಲಣಿಸಿ ಥಗೆ ಹೊಯ್ದು ವಿಷಮ ರಣಭೀತಿಯಿಂದ ಕಂದಿದ ಮುಸುಡಿದವರಾಗಿ ತೊದಲಿನ ನುಡಿಯವರಾಗಿ ಕೈಸನ್ನೆ ಕಾತರರಾಗಿ ಪುರಕ್ಕೆ ಬಂದರು.

೨೦) ಬಸಿದ ನೆತ್ತರದಲ್ಲಿ ಕೆಲವು ಗೋಪಾಲಕರು ಅಲ್ಲಿಯೇ ಅಸು ನೀಗಿದರು. ಕೆಲಕೆಲವರು ತನುವ ಸಂತೈಸಿ 'ಜೀಯಾ ಅಸಾಧ್ಯವಿದು, ಹತ್ತುಸಾವಿರ ಪಶುಸಮೂಹವನ್ನು ಕೊಚ್ಚಿಕೊಂಡು ಹೋದರು ಎಂದು ಭೂಪತಿಗೆ ಗೋಪಾಲಕರು ಹೇಳಿದರು.

೨೧) ಕೇಳಿ ನಿಟ್ಟುಸಿರು ಬಿಟ್ಟನು ವಿರಾಟ ನೃಪನು. ಕೀಚಕನ ಮರಣದಿಂದ ಆತನ ಬಲವೇ ಬಿದ್ದುಹೋದಂತಾಗಿತ್ತು ಆದರೂ ಕ್ಷತ್ರಿಯ ಧರ್ಮವನ್ನು ಕೈಕೊಳ್ಳದೇ ಗತ್ಯಂತರವಿರಲಿಲ್ಲ.

೨೨) ನೃಪಾಲಕರು ಇದನ್ನೆಲ್ಲಾ ಕೇಳಿ ಗಜಿಬಜಿಸಿ ರಭಸದಲ್ಲಿ ಓಲಗದಿಂದ ಮಾತುಕೊಡುತ್ತ ಹೊರಹೊರಟರು. ಆಳು ಕೈದುವಕೊಂಡು ಕರಿಘಟೆಗಳ ಮೇಳವಿಸಿ ಹಲ್ಲಣಿಸಿ ತೇಜಿಗಳಲ್ಲಿ ರಥ ಹೂಡಿ ಮತ್ಸ್ಯಪರಿವಾರ ಕವಿದುದು.

೨೩) ಪುರರಕ್ಷಣೆಗಾಗಿ ರಾಜಕುಮಾರನಾದ ಉತ್ತರನನ್ನು ನೇಮಿಸಿ ಚತುರ್ಬಲಸಹಿತ ರಾಯರ ಸಮೂಹದಲ್ಲಿ ಹೊರಹೊರಟು ನಡೆದನು. ನಮ್ಮ ನೆಲೆಯನ್ನು ಅರಿಯಬೇಕೆಂಬ ಕೆಟ್ಟ ಕರ್ಮದಿಂದ ಕೌರವರು ದನಗಳನ್ನು ಹಿಡಿದರೆನ್ನುತ್ತ ಧರ್ಮಜನು ತಮ್ಮಂದಿರಿಗೆ ನುಡಿದನು.

೨೪) ಧರ್ಮನಂದನನು ತನ್ನೊಳಗೆ ಇದು ಕುಚೋದ್ಯವಿರಬೇಕೆಂದು ತರ್ಕಿಸಿದನು. ಅವಧಿ ತೀರದ ಮುನ್ನ ನೋಡಿ ಅವರು ಮತ್ತೆ ಅರಣ್ಯವಾಸವನ್ನು ಕರುಣಿಸಲು ಬಂದಗೆಂದರು ಧರ್ಮನ ತಮ್ಮಂದಿರು.

೨೫) ಅವಧಿ ಶೀಲಲಿ ವೇಣು ಮಾಣಲಿ ತುರುಹುಯ್ಯಲಯ ಕೇಳಿ ಉದಕವನ್ನು ಕೊಂಡೊಡೆ ಪಾತಕವು. ಆದುದರಿಂದ ಆ ಗೋವುಗಳನ್ನು ಮರುಳಿಸುವೆನು. ಎಂದನು ಧರ್ಮನಂದನನು.

೨೬) ಬಿಳ್ಕೊಂಡು ನುಡಿದು, ಅವಧಿಯ ಇನ್ನಾಳುತನವನ್ನು ತೋರ ಬೇಕು. ಕಾಲವನು ನೂಕಿದೆವು ಕಾಳಗಕ್ಕನುಗುಣವಾಗಿ ಪಾರ್ಥನ ಹೊರತು ಉಳಿದನಾಲ್ವರು ವಿರಾಟಸೈನ್ಯದೊಡನೆ ಯುದ್ಧಕ್ಕೆ ಹೊರಟರು.

೨೭) ಹೊಡೆಯುವ ಭೇರಿಗಳ ವಾದ್ಯಮೇಳದಲ್ಲಿ ಕೆಂಧೂಳಿಯಿಂದ ಮುಸುಕಾಗಿ, ವಿರಾಟ ಭೂಪತಿಯಾಳು ಕವಿದರೆ ಅದನ್ನು ಸೈರಿಸಿ ದನಗಳನ್ನು ಹಿಂದೆ ಇಟ್ಟು ಕಾಳಗವನ್ನು ಮಾಡಿದರು. ಗಟ್ಟಿಯಾಗಿ ಕೂಗಿ ಧಡಾಯಿಸಿ ಭೇರಿಹೊಡೆದು ವಿರಾಟಬಲ ಪರಿಬಲದ ಜೊತೆಗೆ ಕಾದಿತು.

೨೮) ವಿರಾಟನ ಚುಕ್ಕಿಗಳಿರವ ಗಡಸೆದಿರಿ, ಸಾಯದಿರಿ, ಹೆಡೆತಲೆಯ ಕೀಚಕನನ್ನು ಅಳಿದ ಇನ್ನೇನು, ಮಿಡುಕಿ ಯುದ್ಧವನ್ನು ಪ್ರವೇಶಿಸಿ ನರಿಯು ಹಲುಬುವ ರೀತಿಯಲ್ಲಿ ವಿರಾಟ ಕೆಟ್ಟನು ಕಡೆಗೆ ಎನ್ನುತ್ತ ಕುರುಸೇನೆ ನಕ್ಕಿತು.

೨೯) ಕುದುರೆ ಹೊಕ್ಕವು ಆನೆಗಳು ಉತ್ಸಾಹಗೊಂಡವು. ರಥದ ಕುದುರೆಗಳು ಹೊಡರು ಹೊಯ್ದವು. ಕಾಲಾಳುಗಳು ಇರಿದು ಕಾದಿದರು. ಕೆಲವರ ಎದೆಗೆ ಬಾಣಗಳು ನಟ್ಟು ಕರಳು ಕತ್ತರಿಸಿ ಮಿದುಳುರ್ಹಿದು ನೆತ್ತರವು ಹರಿದಿತ್ತು.

೩೦) ಸೈನ್ಯದ ಮುಂಬಾಗ ಮುರಿಯಲು ಕಲಿ ವಿರಾಟನು ಮತ್ಸರ ವಿಲ್ಲದೇ ಕಾದಿದನು ರಕ್ತ ಸಮುದ್ರದಲ್ಲಿ ಕೈಗೋಣು ಕುಣಿದಾಡಿದವು. ಸ್ಪರ್ಧಾಳುಗಳು ಕದನದ ಜಾಣರನ್ನು ಮೂದಲಿಸಿ ಸುಶರ್ಮಕ ಮತ್ಸರ ದಿಂದ ನಗುತ್ತಿರುವಾಗ ಮತ್ತೇ ಕೋಪದಲ್ಲಿ.

೩೧) ಬಲಮುರಿದು ಬಿರುತಿರಲು ಅತಿಸಿಟ್ಟನ್ನು ತಳೆದು ಬಾಣದ ಮಳೆಯನ್ನು ಕರೆಯುತ್ತ ವೈರಿ ವಿರಾಟನ ರಥವನ್ನು ತರುಬಿದನು. ಎಲವೋ ನೀಚಾ, ನೀಚಾ, ಮತ್ಸ್ಯ ನಿನಗೇಕೆ ಆಳುತನವೆಂದು ಹೇಳಿ ಕೈಕೊಂಡು ವಿರಾಟನ ಜೊತೆ ಕಾದಿದನು.

೩೨) ಬಾಣಗಳು ತೀರಲು ಕತ್ತಿಯನ್ನು ತೆಗೆದುಕೊಂಡು ತಿರುವಿ ತಿವಿದಾಡಿದರು. ಮುರಿದರೆ ಪರಿಘದಲ್ಲಿ ಕಾದಿದರು. ಹಲಗೆಯ ಖಡಗದಲ್ಲಿ ಹೊಯ್ದಾಡಿದರು. ಮತ್ಸ್ಯನನ್ನು ಹೊಗುಳುತ, ಕಲಿ ಸುಶರ್ಮಕನು ಬಾಣ ವನ್ನು ಹೊಡೆದು ವಿರಾಟ ರಾಜನನ್ನು ಸೆರೆ ಹಿಡಿದನು.

೩೩) ಸಿಕ್ಕ ವಿರಾಟ ರಾಜನನ್ನು ದೊರೆಗೊಪ್ಪಿಸಿಕೊಟ್ಟರು. ಚುಕ್ಕಿ ಗಳು ಕೀಚಕನ ನೆಳಲಿರೆ ಸಿಕ್ಕವನೇ ವಿರಾಟ ರಾಜನೆನುತ ಇದು ಮಕ್ಕಳಾ ಟಿಕೆಯಾಯ್ತು ತಾವು ಕೈಹಾಕಬೇಕೆಂದು ಮತ್ಸ್ಯನ ಸಹೋದರು ಒದರಿದರು.

೩೪) ಕಾಳಗದಲ್ಲಿ ಹೊಕ್ಕು ಮತ್ಸರ ತಿಳಿಯಲಾರದೊಬ್ಬನೇ ಸೈನ್ಯದ ಮುಂಭಾಗದಲ್ಲಿ ಸಿಕ್ಕನು. ದೊರೆಯನ್ನು ಹಿಡಿದೊಡನೆಯೇ ಸೇನೆಯ ಪ್ರಾಣ ಕೊರಳಲಿ ನಿಲ್ಲಲು ರಣಬಿನ್ನಾಣರು ಜವಗುಂದಿ ಭಂಗವನ್ನು ಕಾಣಲಿಲ್ಲವೆಂದು ಧರ್ಮಸುತ ಭೀಮಂಗೆ ತೋರಿಸಿದ.

೩೫) ಆಗ ಧರ್ಮರಾಯನು ಭೀಮನನ್ನು 'ಅಯ್ಯ ವಿರಾಟನ ಸೇನೆ ಯಲ್ಲಿ ಅನಾಯಕವಾಗುತ್ತಿದೆ ಮತ್ತು ಅವನ ಕುಲಕ್ಕೆ ಕೇಡು ಬಂದಿದೆ. ಇನ್ನು ಸುಮ್ಮನಿರುವದು ಉಚಿತವಲ್ಲ. ಮೊದಲು ವಿರಾಟನನ್ನು ಬಂಧ ವಿಮುಕ್ತನನ್ನಾಗಿ ಮಾಡು' ಎಂಬ ಅಣ್ಣನ ಮಾತಿಗೆ ಮುಂದೆ ಇರುವ ಆಲದ ಮರವನ್ನು ನೋಡಿದನು.

೩೬) ಹೆಮ್ಮರವನ್ನು ಕಿತ್ತಿ ವೈರಿ ಸುಶರ್ಮಕನನ್ನು ಒರೆಸುವೆನು. ಯುದ್ಧಕ್ಕೆ ಬಂದರೆ ಸೈನ್ಯವನ್ನೆಲ್ಲವನ್ನು ಅರೆವೆನು ಜೀಯಾ ನೋಡು ಎನ್ನ ಲಾಗಿ ತಮ್ಮನೇ ಸೈರಿಸು ಮರವನ್ನು ಮುರಿಯಬೇಡ ನಮ್ಮ ಮಾತನ್ನು ಕೇಳು ಕೆಟ್ಟದ್ದನ್ನು ಯಾವಾಗಲಾದರೂ ಮಾಡಬಾರದೆಂದು ಹೇಳಿದನು.

೩೭) ಮರವನ್ನು ಮುರಿದರೆ ನಮ್ಮನ್ನು ಅವರು ತಿಳಿದುಕೊಳ್ಳುವರು. ಕೌರವನು ಈ ಯಮಾನುಷ ಪರಮ ಸಾಹಸನಾದ ಭೀಮಸೇನನು ಇಲ್ಲನೆ ಕುರಕುಲ ಶ್ರೇಷ್ಠಿಯನ್ನು ಒರಸಿ ಕಳೆದರೆ ನಮಗಾರು ವೈರಿಗಳು ಎಂದನು ಭೀಮಸೇನನು.

೩೮) ಉಗ್ರ ಕರ್ಮವನ್ನು ನೆನೆಯಬೇಡ ವ್ಯಗ್ರದಲಿ ಮಾತ್ರ ಗೆಲವು ಸಾಧಿಸಬೇಕು. ಮತ್ತು ಅಜ್ಞಾತದ ಅವಧಿಯನ್ನೂ ಸಾಧಿಸಬೇಕು.

P

ಸಾಕು ವಿರಾಟ ಭೂಪತಿಯ ನಿಗ್ರಹವ ಜಯಿಸೆನಲು ರಿಪುಕುಲದಗ್ರಿಯನ್ನ ಬೆಂಬತ್ತಿ ವಿಲಯಸನ್ನಿಭ ನೆರೆದ ಹಯ, ರಥ ಪದಾತಿಗಳನು.

೩೯) ಸರಳವಾಗಿ ಸಾವಿರದೆಂಟುಸಾವಿರ ಕುದುರೆಗಳನ್ನು ಸೀಳಿದನು. ನೂರಾರು ಕರಿಗಳನ್ನು ಕೊಂದನು ಸಾವಿರಾರು ತೇರಗಳನ್ನು ಅರಿ ಕಾಲಾಳು ಗಳನ್ನು ಬೆಂಬತ್ತಿ ಬಿಡು ಬಿಡು ವಿರಾಟನನ್ನು ಎನ್ನುತ್ತ ಕಲಿಸುಶರ್ಮ ನನ್ನು ಹಿಡಿದನು.

೪೦) ಎಲೆ ಎಲವೊ ಕಲಿಭೀಮನು ನಮ್ಮನ್ನು ಸಲುಹಿದನಲ್ಲಾ. ವಿರಾಟನು ಸಿಲುಕಿದನು. ದಾನಿಯ ಅವಸರಕೆ ಒದಗಬಹುದೇನು ಎಂದು ಉಲಿದು, ಕೈಕೊಂಡು ಅಟ್ಟಲಾಗಿ ರಿಪು ಬಲವನ್ನು ಗಾಬರಿಗೆಡಿಸಿ ಕವಣಿ ಯೊಳಗೆ ಕಲ್ಲು ಬಿದ್ದಂತೆ ವೈರಿ ದಳವು ಕೆದರಿತು.

೪೧) ಪಶುವನ್ನು ಬಿಡು ಮಾರಿ ಕೆರಳಿ ಕೋಪಗೊಂಡನು. ವಿರಾಟ ಭೂಪನ ತೊಂದರೆ ಬೇಡೆನ್ನುತ್ತಾ ಸುಶರ್ಮನು ರಥವನ್ನು ತಿರುಹಿದನು. ಯುದ್ಧದಲ್ಲಿ ಭಟರು ಆಯುಧವನ್ನು ಒಗೆದು ಬದುಕಿದೆವೆಂದರು ಭೀಮನ ಯುದ್ಧದಲ್ಲಿ.

೪೨) ಭೀಮ ಮೆಚ್ಚಿದ ತನ್ನ ಭುಜಬಲದಿಂದ ನನ್ನನ್ನು ಬಿಡಿಸಿದನು ಮತ್ತು ಯಮ ನಂದನನು ಮತ್ಸ್ಯ ನೃಪನನ್ನು ಬಿಡಿಸಿದನು. ಕಲಿ ಸುಶರ್ಮನ ಇರಳಿನ ಕಾಳಗದೊಳಗೆ ದನಗಳು ಮರುಳಿದವು. ಇದು ಪಾಂಡವರಿಗೆ ಮಕ್ಕಳ ಆಟದ ವಸ್ತುವಾಯಿತು.

೪೩) ಕೌರವ ಸೇನೆ ಕಳೆಗುಂದಿ ನಿಂತಿತು. ಸುಶರ್ಮನು ದುಮ್ಮಾ ನದ ಮುಸುಕಿನಲಿ ಪಾಳಯಕೆ ಹಿಂದುರಿಗಿದನು. ಭಾನು ಲೋಕದ ಮೌನ ಮುದ್ರೆ ಮರೆಯಲು ಕುರುರಾಯನು ಉತ್ತರ ಗೋಗ್ರಹಣವನ್ನು ಕೈಕೊಂಡನು.

## ೫. ಪಾರ್ಥ ಮೈದೋರಿದನು ಪರಿಬಲಕೆ

೧) ಕೇಳು ಜನಮೇಜಯಪಾಲ, ಸುಯೋಧನ ಸೈನಿಕರು ಭೀಷ್ಮ, ಕರ್ಣ, ದ್ರೋಣ ಮೊದಲಾಗಿ ಉತ್ತರ ದಿಕ್ಕಿನಿಂದ ವಿರಾಟ ನಗರ

ವನ್ನು ಹೊಕ್ಕು ಕೋಲ ಸೂರಿಯ ಸರಿವಳೆಗೆ ಗೋಪಾಲರ ಪಡೆ ನುಗ್ಗ
ಲಾಗಿ ಕೌರವರಾಳು ನುಗ್ಗಿ ಮುನ್ನುಗ್ಗಿತು.

೨) ಮೇಲೆ ಅಳುಕಿದವರಾಗಿ ತುರುವರಿಗಾಳಗದೊಡನೆ ಮುನ್ನುಗ್ಗಿ ಗೋವರರು ಧೂಳಗೊಟೆಯಲ್ಲಿ, ಅಡಗಿಕೊಂಡರು. ಸೈನ್ಯವು ರಾಜಧಾನಿಯಲ್ಲಿ ಪ್ರವೇಶಿಸಲು ಓಡುತ್ತಿರುವ ಒಬ್ಬ ಗೋವಳಿಗನನ್ನು ಹಿಡಿದು ಆತನ ಮೂಗಿನ ಮೇಲೆ ಸುಣ್ಣವ ಬರೆದು ಹಗೆಯನ್ನು ಪಟ್ಟಣದೊಳಗೆ ಬಿಟ್ಟರು.

೩) ಜಿಗಡು ಮುಸುಕಿದೆ, ಭೀತಿ ಹೆಚ್ಚಿದೆ, ಢಗೆಯ ತುದಿ ನಾಲಿಗೆಯ ತೊದಲನ ನುಡಿಯಿಂದ ಗೋವಳಿಗಳು ಒಡ್ಡೋಲಗಕ್ಕೆ ಬಂದನು. ಬೆದರಿದ ಅವನು ನೃಪನ ಮಗನ ಕಾಲಿಗೆ ಎರಗಿ ಕಳವಳದಿಂದ ದೂರನ್ನು ಹೇಳಿದನು.

೪) ಏಳು ಮನ್ನೆಯ ಗಂಡನಾಗು, ಕೌರವರಾಯನು ತರುಗಳನ್ನು ಕೋಳು ಹಿಡಿದನು ಸೈನ್ಯವು ಭೂಮಿಯಗಲದಲ್ಲಿ ಬರುತ್ತಿದೆ. ದಾಳಿ ಬರುತ್ತಿದೆ. ನಿನ್ನಾಳು ಕುದುರೆಗಳನ್ನು ಕರಸಿಕೊ ರಾಣಿವಾಸದ ಗುಂಪು ತಗೆಸೆಂದು ನುಡಿದನು.

೫) ಎಲವೊ ನಿನ್ನ ತುದಿಯ ಮೂಗಿನ ಬಿಳುಪೇನು ? ಈ ಕಳವಳವೇಕೆ ? ನಿನ್ನಿನ ಬವರವನು ನಮ್ಮಯ್ಯ ಗೆಲಿದನಲ್ಲವೆ ಭಯಪಡಬೇಡ ಹೇಳು ಆದದ್ದೇನು ಎನ್ನಲಾಗಿ ಕುರುಸೇನೆ ಬಡಗ ದಿಕ್ಕಿನಲ್ಲಿ ದನಗಳನ್ನು ಹಿಡಿದರು.

೬) ಎತ್ತ ದೃಷ್ಟಿಹರಿಸಿದರೂ ಅಲ್ಲಿ ಆನೆಯ ಥಟ್ಟು ಕಾಲಾಳುಗಳು, ರಥದ ಕುದುರೆಗಳು. ರಾಯರಾವುತರು ಸುತ್ತಲೂ ಕಾಣುತ್ತಾರೆ. ಮನ ಹರಿದಕಡೆಗೆ ಸೈನ್ಯ ಬಿಟ್ಟು ಮತ್ತೇನೂ ಕಾಣುವದಿಲ್ಲ ಜೀಯಾ ಇದು ವೈರಿ ವಾಹಿನಿ ಎಂದನು.

೭) ನೀನು ಒಳಗೆ ಯುದ್ಧ ಮಾಡುವಡಿದ್ದರೆ ಕೋಟೆಯ ರಕ್ಷಣೆಯನ್ನು ಮಾಡಬೇಕು. ಹೊರಗೆ ಹೊರಡುವಂತಿದ್ದರೆ ಮೂಲ ಬಲಮೊಡನೆ ಒಡನೆಯೇ ಪ್ರಮಾಣವನ್ನು ಬೆಳೆಸಬೇಕು ಎನ್ನಲು ಕೆಲ ಬಲನು ನೋಡಿ

ದನು. ಮಿೂಸೆಯನ್ನು ತಿರುವಿದನು ತನ್ನಿದಿರಿನಲ್ಲಿರುವ ಲಲನೆಯ
ಮುಖವನ್ನು ನೋಡಿ ಉತ್ತರವನ್ನು ಕೊಟ್ಟನು.

೮) ಯುದ್ಧ ಹೆದರಿಕೆಯಿಂದ ಬಡಬಡಿಸುತ್ತಿರುವ ಈ ಕುನ್ನಿಗಳನ್ನು
ನೂಕೋ ಅತ್ತ. ನಾನು ಕೋಸಗೊಂಡು ಯುದ್ಧಕ್ಕೆ ನಿಂತರೆ ದೇವ
ಗಳಾದವರು ಕೂಗಿ ನಡುಗಿ ಹೋಗುತ್ತಾರೆ. ಈ ಕೌರವ ಕುನ್ನಿಗ
ಲೆಕ್ಕವೇ, ಅವರನ್ನು ನೂಕು ಅತ್ತವೆಂದನು ಸತಿಯ ಇದುರಿನಲ್ಲಿ.

೯) ಬಲವು ಎಷ್ಟು ಘನವಾದೋಡೆನು. ? ಅದು ನಿನಗೆ ಕಠಿಣ
ಜೀಯ, ಜಗತ್ತಿನಲ್ಲಿ ಬೆಳಗುತ್ತಿರುವ ಸೂರ್ಯನ ಎದುರಿನಲ್ಲಿ ಕತ್ತಲೆ
ಅಬ್ಬರದ ದಿಟ್ಟತನವೆ, ಎಂದಾಗ ಅದಕ್ಕೆ ಗೋವಳಿಗನು 'ರಾಯ ನಿ
ಗೋವರ ದೆಸೆಗೆ ಬಂದು ಕಾವುದು ನಿನ್ನ ಕೈಗುಣವ ಕೌರವರ ಥಟ್ಟಿಯ
ತೋರುವದು ಎಂದನು.

೧೦) ಆ ಮಾತನ್ನು ರಾಜಕುಮಾರನು ಸತ್ಯವೆಂದು ನಂಬಿ ತಾನು
ಶೂರನೆಂದುಕೊಂಡನು. ಮತ್ತೊಮ್ಮೆ ಆತನ ಕೈ ಬೆರಳುಗಳು ಮೀಸೆ
ಯನ್ನು ಹುರಿಗೊಳಿಸಿದವು. ಮತ್ತೊಮ್ಮೆ ಆತನ ಕಣ್ಣುಗಳು ಸುತ್ತಲೂ
ಕುಳಿತಿದ್ದ ಸುಂದರಿಯರನ್ನು ಅವಲೋಕಿಸಿದವು. ಪೌರಷ ಮತ್ತೊಮ್ಮೆ
ಆತನ ನಾಲಿಗೆಯ ಮೇಲೆ ನಲಿದಾಡಿತು.

೧೧) ಸೋದರರ ರಾಜ್ಯವನ್ನು ಅಪಹರಿಸಿ ಅವರ ಹೆಂಡತಿಯನ್ನು
ಪರಾಭವಗೊಳಿಸಿ ಆ ಪಾಂಡವರನ್ನು ಅಡವಿಗೆ ಅಟ್ಟಿದ ಮಾತ್ರದಿಂದ
ತಾನು ಅಜೇಯನೆಂದು ಭಾವಿಸಿದನೋ ಆ ಕೌರವ? ತನ್ನ ಕೊಬ್ಬಿದ ಭುಜ
ಬಲವನ್ನು ನನ್ನಲ್ಲಿ ತೋರಿಸಿಬಿಡುವದಕ್ಕೆ ಹೊರಟುಬಿಟ್ಟನೋ ಅವನು.
ನನ್ನನ್ನೇನು ಬಡ ಯುಧಿಷ್ಠಿರನೆಂದು ಬಗೆದನೋ ? ನನಗೆ ಕೋಪ ಬಂದು
ಅವನ ಕೀರ್ತಿಯನ್ನೆಲ್ಲಾ ಅಳಿಸಿ ಬಿಡುವನೆಂದು ಅವನಿಗೆ ಗೊತ್ತಿಲ್ಲಾ
ಎನುತ ಸುಕುಮಾರನು ಸಿಟ್ಟಿಗೆದ್ದನು.

೧೨) (ಯಮನ ಮೀಸೆಯನ್ನು ಎಳೆದು ತಮಾಷೆ ಮಾಡ ಹೊರ
ಟನೇನೊ ! ಮೃತ್ಯುವಿನ ಮೈಮೇಲಿನ ಬಟ್ಟೆಯನ್ನು ಎಳೆದು ಕೆರಳಿಸು
ವಂತೆ ಅವನು ನನ್ನ ಮೇಲೆ ಏರಿ ಬಂದಿದ್ದಾನೆ. ಅವನಿಗೆ ಎಲ್ಲೊ ಹುಚ್ಚು

ಹಿಡಿದಿರಬೇಕು. ಎಂದು ಯುವತಿಯರ ಮುಖವನ್ನು ನೋಡುತ್ತ ಕೂಗಾಡಿದನು.

೧೩) ಯಾರೊಡನೆ ಯುದ್ಧ ಮಾಡಲಿ? ಕೆಲವರು ಹಾರವರು; ಕೆಲವರು ಯಮನ ನೆರೆಹೊರೆಯವರು; ಮತ್ತೇ ಕೆಲವರು ಅಧಮಕುಲದಲ್ಲಿ ಹುಟ್ಟಿದವರು. ಇವರೇ ವಿರರು ಎಂಬವರು ಮೇಲಿನ್ನಾರ ಹೆಸರುಂಟವ ರೊಳೊಂದು ಕುಮಾರನು ನೆಣಗೊಬ್ಬಿನಲ್ಲಿ ಹೆಂಗಸರ ಇದುರಿನಲ್ಲಿ ನುಡಿ ದನು.

೧೪) ಇದರ ಮೇಲೆ ರಾಜರಾದವರು ಬಂದು ಗೋವುಗಳನ್ನು ಹಿಡಿಯುವದು ಎಲ್ಲಾದರೂ ಉಂಟೆ? ಕೌರವನು ಅಧಮ ಕಾರ್ಯವನು ಮಾಡಿ ಶಾಸ್ವತವಾಗಿ ಅಪಕೀರ್ತಿಗೆ ಭಾಜನನಾದ. ಗೋಧನವನ್ನು ಇಟ್ಟು ಕೊಂಡು ಬದುಕುವವನಾದನೆಂದು ಕತ್ತಿಯನ್ನು ಜಡಿದನು.

೧೫) ಆ ನೀಚನನ್ನು ಸಂಹರಿಸಿ ಹಸ್ತಿನಾಪುರದೊಳಗೆ ನನ್ನ ರಾಣಿಯನ್ನಿಡುವೆನು. ಕೌರವರ ಸೈನ್ಯವನ್ನೆಲ್ಲಾ ಧೂಳೀ ಪಟಮಾಡಿ ಜಯಾಂಗನೆಯನ್ನು ಸೆಳೆ ತರುವೆನು. ಎಂದನು ಉತ್ತರನು ಕೋಮಲೆಯರ ಎದುರಿಗೆ ಬಾಯಿಗೆ ಬಂದುದನ್ನು ಹರಟುತ್ತಿದ್ದನು.

೧೬) ಈಗ ಮಾತನಾಡಿ ಪ್ರಯೋಜನವೇನು? ಅನ್ಯಾಯವಾಗಿ ನನಗೆ ಸಾರಥಿಯಾಗ ಬಲ್ಲವನು ನಿನ್ನಿನ ಯುದ್ಧದಲ್ಲಿ ಸತ್ತುಹೋದನು. ಶಿವ ಶಿವಾ ಈಗ ನನ್ನ ಮನಸ್ಸಿಗೆ ಹೊಂದಿಕೊಳ್ಳುವಂತಹ ಸಾರಥಿಯೊಬ್ಬನು ದೆರೆತರೆ ಕೌರವನ ಸೈನ್ಯಕ್ಕೆಲ್ಲಾ ಹಬ್ಬವನ್ನು ಮಾಡಿತೋರುವೆನು ಎನ್ನ ಕೈಗುಣವ ಎಂದು ಕೊಚ್ಚಿಕೊಂಡನು.

೧೭) ಶೂರನಾದ ಪಾರ್ಥನು ಈತನ ಭಾಷೆಯಲ್ಲವನ್ನು ಕೇಳಿ ಪಾಂಚಾಲೆಯನ್ನು ಏಕಾಂತದಲ್ಲಿ ಕರೆದು ಕಾಲ ಸವೆದುದು ನಮ್ಮ ರಾಜ್ಯದ ಮೇಲೆ ಕೌರವರಾಳುಗಳು ನಮಗೋಸ್ಕರವೇ ಬಂದಿವೆ ಕಾಂತೆ ಕೇಳೆಂದನು.

೧೮) ನಿನಗೆ ನರನೇ ಸಾರಥಿಯೆಂದು ನೀನು ಸೂಚಿಸು ಮತ್ತು ನೀನು ನನ್ನನ್ನು ಈಗಲೇ ಕರೆಯಿಸು ಎನ್ನಲಾಗಿ ದ್ರೌಪದಿಯು ಉತ್ತರೆಯ ಬಳಿಗೆ ಬಂದು ಹಿಂದೆ ಖಾಂಡವ ದಹನದ ಕಾಲದಲ್ಲಿ ಈ ಬೃಹನ್ನಳೆ

ಅರ್ಜುನನಿಗೆ ಸಾರಥಿಯಾಗಿದ್ದ, ಬೇಕಾದರೆ ಈಗ ರಾಜಕುಮಾರನಿಗೆ ಸಾರಥಿ ಯಾಗಬಲ್ಲಳೆಂದು ಸತಿ ಉತ್ತರೆಗೆ ಹೇಳಿದಳು.

೧೯) ಇದನ್ನು ಕೇಳಿ ಉತ್ತರೆಗೆ ಬಹು ಸಂತೋಷವಾಯಿತು. ಅವಳು ಓಲಗಕ್ಕೆ ಬಂದು ಅಣ್ಣನ ಪಾದಗಳಿಗೆ ನಮಿಸಿ ಕೈಮುಗಿದು ಈ ವಿಚಾರವೆಲ್ಲವನ್ನು ತಿಳಿಸಿ ಅಣ್ಣಯ್ಯ ಈಗಲೇ ಯುದ್ಧಕ್ಕೆ ಹೋಗಿ ಶತ್ರುಗಳನ್ನು ಜಯಸು ನಡೆ. ಉತ್ತರೆ ನಗುತ ಬೆಸಗೊಂಡಳು.

೨೦) ತಂಗಿ ಹೇಳಾ ತಾಯೆ, ನಿನಗೆ ಈ ಸಂಗತಿಯನ್ನು ಯಾರು ತಿಳಿಸಿದರು? ಕಂಗಣಿಯುಳ್ಳವನ ಸಾರಥಿತನದ ಚಮತ್ಕಾರದಲ್ಲಿ ಮಂಗಳವು. ರಣದಲ್ಲಿ ಭಂಗನಹೆ. ನಿನ್ನಾಣೆ ತನ್ನಯ ತುಂಗ ವಿಕ್ರಮತವು ಉಳಿಯುವದೇ ಲೇಸೆಂದನು.

೨೧) ಸೈರಂಧ್ರಿಯು ಸುರಪನನಂದನವನ್ನು ಸುಡುವಲ್ಲಿ, ಅರ್ಜುನನ ಸಾರಥಿಯಾಗಿರಲಿಲ್ಲವೇ ಹಿಂದು ಮುಂದು ನೋಡದೆ ನಮ್ಮ ಬೃಹಂದಳೆಯೇ ಲೇಸಾಯ್ತೆಂದು ನಗುತ ಸೈರೆಂಧ್ರಿ ಹೀಗೆ ಅಂದನು.

೨೨) ಸಾರಥಿಯನ್ನು ಕೊಟ್ಟು ನನ್ನನ್ನು ಉಳುಹಿದೆ. ವಾರಿಜಾನನೆ ಲೇಸನ್ನು ಮಾಡಿದೆ. ಕೌರವನ ತನಿಗರಳನ್ನು ತಡಮಾಡದೆ ತೆಗೆಯಿಸು, ನಾರಿಯೋ ನೀನೆ ಹೋಗಿ ಸಾರಥಿಯನ್ನು ಕರೆಯೆಂದು ಹೇಳಿದನು. ನಮ್ಮನ್ನು ವೀರಸಾರಥಿ ಲೆಕ್ಕಿಸುವದಿಲ್ಲ ಅದಕ್ಕಾಗಿ ನಿಮ್ಮ ತಂಗಿಯ ಕಳುಹಿ ಕರೆಸುವದು ಒಳ್ಳೆಯದು ಎನ್ನಲಾಗಿ.

೨೩) ತಾಯೆ ನೀನೆ ಹೋಗಿ ಸಾರಥಿಯನ್ನು ಕರೆದುಕೊಂಡು ಬಾ ಎಂದು ಉತ್ತರನು ಹೇಳಲು ಕಮಲ ನೇತ್ರೆಯಾದ ಉತ್ತರೆಯು ಹಾಗೆ ಆಗಲಿ ಎಂದು ಹೇಳಿ ಕಾಮನ ಚಿಟ್ಟಾನೆಯಂತೆ ಹೊರಟಳು. ಆ ಅರಸಗುವರಿಯ ನಡುಗೆಯು ಅಸಾಧಾರಣವಾದ ಸೌಂದರ್ಯದಿಂದ ಕೂಡಿತ್ತು. ಅತಿಶಯವಾದ ಗಾಂಭೀರ್ಯದಿಂದ ಅವಳು ನಡೆದಿದ್ದಳು. ಈ ರೀತಿಯಾಗಿ ಅವಳು ದಾರಿಯಲ್ಲಿ ಹೋಗುತ್ತಿದ್ದಾಗ ಪಿಟಪುರುಷನ ಇಂದ್ರಿಯಗಳೆಲ್ಲ ಮುಗ್ಧವಾದವು. ಎಲ್ಲ ಜನರ ಕಣ್ಣುಗಳನ್ನು ಮನಸ್ಸುಗಳನ್ನೂ ಅವಳು ಆಕರ್ಷಿಸಿದಳು.

೨೪) ಬೃಹನ್ನಳೆಯ ವೇಷದಿಂದ ಇದ್ದ ಅರ್ಜುನನು ಉತ್ತರೆಯು ಬಂದುದನ್ನು ನೋಡಿದನು. ಮತ್ತು ಎಲೈ ಮಗಳೇ, ಉತ್ತರೇ, ಇದೇನು ಇಷ್ಟು ಜೋರಿನಿಂದ ನಡೆದು ಬಂದೆ. ನೀನು ಬರುವ ರೀತಿಯನ್ನು ನೋಡಿದರೆ, ಏನೋ ಒಂದು ದೊಡ್ಡ ಕೆಲಸಕ್ಕಾಗಿ ಬಂದವಳಂತೆ ಕಾಣಿಸುತ್ತೀ, ಎಂದು ಅನ್ನಲು ನಗುತ್ತ ಉತ್ತರೆಯು ವಿಶೇಷವೇನೂ ಇಲ್ಲ; ನನ್ನ ಮಾತನ್ನು ವ್ಯರ್ಥಮಾಡದೆ ನಡೆಸುವದೆಂದು ವಚನವನ್ನಿತ್ತರೆ ಹೇಳುವೆನು ಎಂದಳು. ಅದಕ್ಕೆ ಮಗಳೇ ಅದೇನು? ಹೇಳು ನಿನ್ನ ಮಾತನ್ನು ನಾನೆಂದಾದರೂ ಮೀರುವೆನೇ? ಎಂದು ಬೃಹನ್ನಳೆ ಮಾತನಾಡಿದನು.

೨೫) ಹಸ್ತಿನಾಪುರದ ಅರಸರೆಲ್ಲರೂ ಒಟ್ಟು ಗೂಡಿ ಇಲ್ಲಿಗೆ ಬಂದಿದ್ದಾರೆ.; ಮತ್ತು ನಮ್ಮ ಹೊಲಗಳೊಳಗೆ ಇದ್ದ ಒಂದು ಲಕ್ಷ ಆಕಳುಗಳನ್ನು ಸೆರೆ ಹಿಡಿದಿದ್ದಾರೆ. ಅವರೊಡನೆ ಯುದ್ಧ ಮಾಡಿ ಗೋಪಾಲಕರ ಸೈನ್ಯವೆಲ್ಲ ಸತ್ತುಹೋಯಿತು. ಇನ್ನು ಅವರನ್ನು ಇಲ್ಲಿಂದ ಹೊಡೆದೋಡಿಸ ಬೇಕೆಂದರೆ ನಮ್ಮಣ್ಣನಿಗೆ ಸಾರಥಿಯಾಗಲು ಯೋಗ್ಯರಾರು ಇಲ್ಲ. ನೀವು ಹಿಂದಕ್ಕೆ ಆ ಅರ್ಜುನನಿಗೆ ಸಾರಥಿಯಾಗಿದ್ದರೆಂದು ಕೇಳಿ ನಿಮ್ಮ ಕಡೆಗೆ ಬಂದಿದ್ದೇನೆ ಹೀಗೆ ಚಂದವದನೆಯಾದ ಆ ಉತ್ತರೆಯು ಹೇಳಿದಳು.

೨೬) ಇದಕ್ಕೂ ಹೆಚ್ಚಾಗಿ ನಿಮಗೆ ಏನನ್ನು ಹೇಳಬೇಕು.? ಎಂದು ಉತ್ತರೆಯು ಹೇಳಲು, ಅದಕ್ಕೆ ಬೃಹನ್ನಳೆಯು 'ಉತ್ತರೇ, ನಿನ್ನ ಮಾತನ್ನು ಮೀರಬಲ್ಲನೇ?' ನಡೆ, ಹೋಗುವ, ಮೊದಲು ಸಾರಥಿಯಾಗಿದ್ದೆನು. 'ಇಗಳಾದರೂ ನೋಡುವ' ಎಂದು ಹೇಳಿ ವೇಗದಿಂದ ನಡೆದನು. ಉತ್ತರೆಯೂ ಅವನನ್ನು ಹಿಂಬಾಲಿಸಿದಳು. ಶಕ್ತಿ ಸಂಪನ್ನನಾದ ಆ ಬೃಹನ್ನಳೆಯು ಓಲಗಕ್ಕೆ ಬಂದುದನ್ನು ನೋಡಿದ ಕೂಡಲೆ ಉತ್ತರನಿಗೆ ಹೇಳಕೂಡದಷ್ಟು ಆನಂದವಾಯಿತು. ಅವನು ಬೃಹನ್ನಳೆಯನ್ನು ಆದರ ದಿಂದ ಕರೆದು ಬರಮಾಡಿಕೊಂಡನು.

೨೭) ಎಲೈ ಬೃಹನ್ನಳೆಯೇ, ನಾನು ಪ್ರಸಿದ್ಧರಾದ ವೈರಿಗಳೊಡನೆ ಯುದ್ಧಮಾಡಬೇಕಾಗಿದೆ. ನನ್ನ ಸಾರಥಿಯು ಸತ್ತುಹೋಗಿದ್ದಾನೆ. ಆದುದರಿಂದ ನೀನು ಸಾರಥಿಯಾಗಿ ನನ್ನ ಮಾನವನ್ನು ಉಳಿಸಬೇಕು. ಆದುದರಿಂದ ನೀನು ಮನಸ್ಸಿನ ಮೇಲೆ ತೆಗೆದುಕೊಂಡು ನನ್ನ ಸಾರಥಿ

ಯಾಗಬೇಕು.; ಎಂದರೆ ವೈರಿಯೊಡನೆ ದಂಡಿನೊಡನೆ ಯುದ್ಧ ಮಾಡಿ ನನ್ನ ಪರಾಕ್ರಮವನ್ನು ತೋರಿಸುವೆನು.

೨೮) ನಾನು ನಾಟ್ಯ ಶಾಸ್ತ್ರವನ್ನು ಚನ್ನಾಗಿ ಅಧ್ಯಯನ ಮಾಡಿ ಶಿಕ್ಷಣ ಕೊಟ್ಟವನಿದ್ದೇನೆ. ಆ ಕಲೆಯು ನನಗೆ ಚನ್ನಾಗಿ ಗೊತ್ತುಂಟು. ಯುದ್ಧದಲ್ಲಿ ಸಾರಥಿಯಾಗುವ ಕೆಲಸವನ್ನು ಬಿಟ್ಟು ಬಹಳ ದಿನಗಳಾದವು. ಆದುದರಿಂದ ಆ ಕಲೆಯು ಮರೆತುಹೋಗಿದೆ. ಮೇಲಾಗಿ ಭೀಷ್ಮನೇ ಮೊದಲಾದವರು ಶತ್ರುಪಕ್ಷದಲ್ಲಿರುವಂತಹ ಶೂರರು. ರೂಢಿಯ ಅನುಭವವು ಇಲ್ಲದಿದ್ದರೆ ಸಾರಥ್ಯವನ್ನು ಮಾಡುವ ಯೋಗ್ಯತೆಯು ನಿಲ್ಲಲಾರದು. ಯುದ್ಧದಲ್ಲಿ ಶೌರ್ಯ ಧೈರ್ಯಾದಿಗಳನ್ನು ಸೂರೆ ಮಾಡುವ ಸಾಮರ್ಥ್ಯವು ತಜ್ಞತೆ ಇಲ್ಲದವರಿಗೆ ಹೇಗೆ ಉಂಟಾದೀತು ?

೨೯) ಎಲೈ ಬೃಹನ್ನಳೆಯೇ, ನಾನು ಇರುವಾಗ ಭೀಷ್ಮನೇ ಮೊದಲಾದವರು ನಿನಗೆ ಏನನ್ನೂ ಮಾಡಲಾರರು. ಅಂಜಬೇಡ. ನಿಶ್ಚಿಂತೆಯಿಂದ ನನ್ನ ಸಾರಥಿಯಾಗು. ಆ ವೈರಿಗಳೆಲ್ಲರನ್ನೂ ಒಂದು ಕ್ಷಣದಲ್ಲಿ ಗೆಲ್ಲುವೆನು. ನಾನು ಎಂಥಹ ಶೂರನೆಂಬುದು ನಿನಗೆ ಇನ್ನೂ ಗೊತ್ತಿಲ್ಲ ಅಶ್ವತ್ಥಾಮ, ಕರ್ಣ, ದ್ರೋಣ, ಇವರೆಲ್ಲರನ್ನೂ ನಾನು ಚನ್ನಾಗಿ ಬಲ್ಲೆನು. ಆದುದರಿಂದ ಸ್ವಲ್ಪವೂ ಹೆದರದೆ ನನ್ನ ಸಾರಥಿಯಾಗು. ಹೆಚ್ಚು ಮಾತೇಕೆ ? ಎಂದು ಆ ಉತ್ತರನು ಹೇಳಿದನು.

೩೦) ಉತ್ತರ ಕುಮಾರನೇ, ಆಗಲಿ ಶೂರನಾದ ನೀನೇ ಯುದ್ಧ ಮಾಡುವವನಿದ್ದ ಬಳಿಕ ಹೆಚ್ಚೇನು ಬೇಕು. ? ನಾನು ಹರಿಯದವನಲ್ಲ ಮುದಕನು· ಆದರೂ ಸಾರಥ್ಯವನ್ನು ವಹಿಸಿ ನೋಡುತ್ತೇನೆ. ರಥವನ್ನು ಬರಮಾಡು ಎಂದು ಬೃಹನ್ನಳೆ ಹೇಳಿದನು. ಮತ್ತು ಲಾಯದಲ್ಲಿ (ಕುದುರೆಯ ಮನೆಗೆ ಲಾಯವೆಂಬ ಹೆಸರು) ಹೋಗಿ ಉತ್ತಮವಾದ ಕುದುರೆಗನ್ನು ಆರಿಸಿ ತಂದು ರಥಕ್ಕೆ ಹೂಡಿ ಎಲ್ಲವನ್ನು ಸಿದ್ಧ ಮಾಡಿದನು. ಮತ್ತು ರಥವನ್ನು ಹತ್ತಿ ಕುಳಿತನು.

೩೧) ಅರಮನೆಯಲ್ಲಿದ್ದ ಹೆಂಗಸರೆಲ್ಲರೂ ಆ ಉತ್ತರನಿಗೆ ಮಂಗಳವಾಗಲೆಂಬರ್ಥದಿಂದ ಆರತಿಯನ್ನು ಮಾಡಿದರು. ಅವನ ಸರ್ವಾಂಗವು ವಿಧ ವಿಧದ ಅಲಂಕಾರಗಳಿಂದ ಥಳಿಥಳಿಸುತ್ತಿತ್ತು; ಬಂದು ರಥವನ್ನು

ಏರಿ, ಬಂಗಾರದ ಕೆತ್ತಿಗೆಯ ಕೆಲಸ ಮಾಡಿದ ಕವಚವನ್ನು (ಕಬ್ಬಿಣದ ಅಂಗಿಯನ್ನು) ಬೃಹನ್ನಳೆಗೆ ಕೊಟ್ಟನು. ಜೋಡು ಪದರಿನ ಸಿರಸ್ತ್ರಾಣವು (ಕಬ್ಬಿಣದ ಟೊಪ್ಪಿಗೆಯು) ಉತ್ತರನ ಮೈಗೆ ಚನ್ನಾಗಿ ಒಪ್ಪುತಿತ್ತು. ಈ ರೀತಿಯಾಗಿ ಅವನು ಕಾಳಗಕ್ಕೆ ಸಿದ್ಧನಾದನು.

೩೨) ಬೃಹನ್ನಳೆಯು ಕವಚವನ್ನು ತೆಗೆದುಕೊಂಡು ಏನನ್ನೂ ಅರಿಯದವನಂತೆ ತಿರುಮುರುವಾಗಿ ತೊಡ ಹತ್ತಿದನು. ಅದನ್ನು ನೋಡಿ ಅಲ್ಲಿದ್ದ ಹೆಂಗಸರು ಚಪ್ಪಾಳೆ ಹೊಡೆದು ಖೊಳ್ಳೆಂದು ನಕ್ಕರು. ಅದಕ್ಕೆ ಬೃಹನ್ನಳೆಯು ಲಜ್ಜಿತನಾದಂತೆ ನಟಿಸಿ ತಲೆಯನ್ನು ಬಾಗಿಸಿದನು. ಆ ಮೇಲೆ ಮತ್ತೆ ಕವಚದ ಮೋರೆಯು ಮೇಲೆ ಆಗುವಂತೆ ತೊಡಹತ್ತಿದನು. ಅದನ್ನು ನೋಡಿ ಉತ್ತರೆಯು ಪಾಪ! ಸಾರಥಿಗೆ ಗೊತ್ತಿಲ್ಲ ತಪ್ಪೇನು? ಎಂದು ಹೇಳಿ ತಾನೇ ಅವನಿಗೆ ಸರಿಯಾಗಿ ತೊಡಸಿದನು.

೩೩) ಈ ಸಾರಥಿಗೆ ಕವಚವನ್ನು ತೊಟ್ಟುಕೊಳ್ಳುವದೇ ಗೊತ್ತಿಲ್ಲ ಎಂದಮೇಲೆ ಯುದ್ಧ ರಂಗಕ್ಕೆ ಹೋಗಿ ಸಾರಥಿಯಾಗಿ ಯಾವ ರೀತಿಯಿಂದ ಇವನು ಹೋರಾಡುವನೋ ಎನೋ! ಎಂದು ಮಾತನಾಡುತ್ತ ಎಲ್ಲ ಹೆಂಗಸರು ನಗಹತ್ತಿದರು. ಮತ್ತು ಉತ್ತರೆಯು ಎಲೈ ಸಾರಥಿಯೇ, ನಮ್ಮ ಅಣ್ಣನು ಯುದ್ಧದಲ್ಲಿ ಗೆಲ್ಲುತ್ತಾನೆ; ನೀನು ಸೋತವರ ವಸ್ತ್ರಾಭರಣಗಳನ್ನು ತೆಗೆದುಕೊಂಡು ಬಾ ಎಂದಳು.

೩೪) ಬೃಹನ್ನಳೆಯು ಮುಗಳ್ನಗೆ ನಗುತ್ತಲೆ ಉತ್ತರೆಯು ಹೇಳಿದ ಮಾತಿಗೆ ಒಪ್ಪಿಗೆಯನ್ನು ತೋರ್ಪಡಿಸಿದನು. ಮತ್ತು ರಥವನ್ನು ಹೂಡಿ ಅದನ್ನು ನಡೆಯಿಸತೊಡಗಿದನು. ಆಗ ರಥದ ಕುದುರೆಗಳು ಗಾಳಿಯ ವೇಗಕ್ಕಿಂತ ಹೆಚ್ಚಿನ ವೇಗದಲ್ಲಿ ಓಡಹತ್ತಿದವು. ಉಳಿದ ಸೈನದವರಿಗೆ ಉತ್ತರನ ತೇರಿನ ಹಿಂದಿಂದೆ ಹೋಗುವದು ಅಸಾಧ್ಯವಾಯಿತು. 'ಈ ಸಾರಥಿಯ ರೀತಿ ಹೊಸದಾಗಿದೆ. ಇವನ ಬೆನ್ನ ಹಿಂದಿಂದೆ ಹೋಗುವದು ನಮಗಂತೂ ಅಸಾಧ್ಯವು' ಎಂದು ಮಾತನಾಡಿ ಉಳಿದ ಸೈನ್ಯದವರ ಪಟ್ಟಣದಲ್ಲಿಯೇ ನಿಂತರು.

೩೫) ಎಲೈ ಪರೀಕ್ಷಿತನ ಮಗನಾದ ಜನಮೇಜಯನೇ ಕೇಳು, ಅರಸರಲ್ಲಿ ಹೆಚ್ಚಿನವನಾದ ಅರ್ಜುನನು ಅತಿಶಯವಾದ ವೇಗದಿಂದ ರಥವನ್ನು ಯುದ್ಧಭೂಮಿಗೆ ತಂದು ನಿಲ್ಲಿಸಿದನು. ಆಗ ದುರ್ಯೋಧನನ ದಂಡಿನಲ್ಲಿ ಎಲ್ಲಿ ನೋಡಿದರೂ ಸಂಭ್ರಮವೇ ಸಂಭ್ರಮವು. ನೋಡಿದಲ್ಲೆಲ್ಲ ಬರ್ಚಿಗಳ ತುದಿಗಳು ಗುಂಪು ಗುಂಪಾಗಿ ಕಾಣುತ್ತಿದ್ದವು. ಖಡ್ಗದ ಅಲುಗಿನ ಧಾರೆಯ ಹೊಳಪು ಥಳಥಳಿಸುತ್ತಿತ್ತು. ಪತಾಕೆಗಳು ಸಾಲುಸಾಲಾಗಿ ಮೆರಿಯುತ್ತಿದ್ದವು. ಚೂರಿಗಳು ಬೀಸಾಡುತ್ತಿದ್ದವು. ತನ್ನ ಮುಂದೆ ಇದ್ದ ಇಂತಹ ಆ ಸೈನ್ಯವನ್ನು ಉತ್ತರನು ದೂರದಿಂದ ನೋಡಿದನು.

೩೬) ಕೌರವನ ಆ ದಂಡಿನಲ್ಲಿ ತಾಕಲಾಡುತ್ತಿದ್ದ ಕತ್ತಿಗಳಿಂದ ಕಿಡಿಗಳು ಹೊರಡುತ್ತಿದ್ದವು; ಸೇನಾ ನಾಯಕರೂ, ಸೈನಿಕರೂ ಇಟ್ಟುಕೊಂಡಿದ್ದ ಆಭರಣಗಳ ಕಾಂತಿಯು ಕೆಂಪಾದ ಉರಿಯಾಗಿತ್ತು; ಅಲ್ಲಿಯ ಜನರು ತಿರು ತಿರುಗಿ ಉಚ್ಚಾರ ಮಾಡುತ್ತಿದ್ದ ಒಂದೇ ತರಹದ ಶಬ್ದಗಳ ಕೋಲಾಹಲವು ' ಛಟ್ ಛಟ್' ಎಂಬ ಸಪ್ಪಳದಂತೆ ಇದ್ದಿತು. ಎಲ್ಲ ಕಡೆಗೂ ತುಂಬಿದ ಧೂಳಿಯೇ ಹೊಗೆಯ ಸಮೂಹವಾಗಿತ್ತು. ಈ ರೀತಿಯಲ್ಲಿದ್ದ ಆ ಸೇನೆಯು, ವಿರಾಟರಾಯನ ಪುತ್ರನಾದ ಉತ್ತರಕುಮಾರನ ಕಣ್ಣಿಗೆ ಮತ್ತೆ ಮತ್ತೆ ಕಾಳ್ಗಿಚ್ಚಿನಂತೆ ತೋರಿತು.

೩೭) ಇವೇನು ದಂಡಿನೊಳಗಿನ ಆನೆಗಳ ಹಿಂಡೋ ಅಥವಾ ಪ್ರಳಯಕಾಲದ ಮೋಡಗಳ ಗುಂಪೋ ? ಇವೇನು ದಂಡಾಳುಗಳ ಅರ್ಭಟಿಯೋ, ಸಿಡಿಲಿನ ಗರ್ಜನೆ ವಿದ್ಯೆಯ ಸಾಧನೆಯೋ ? ಇವೇನು ಸೈನಿಕರ ಕೈಯೊಳಗಿನ ಆಯುಧಗಳೋ, ಪ್ರಳಯಕಾಲದ ಬೆಂಕಿಯಿಂದ ಉತ್ಪನ್ನವಾದ ಹೊಗೆಯ ರಾಶಿಯೋ ? ಇವೇನು ದಂಡಿನಲ್ಲಿ ಮೇಲಕ್ಕೆ ಎಬ್ಬಿಸಿದ ಪತಾಕೆಗಳ ಸಾಲುಗಳೋ ಅಥವಾ ಭೂಮಿಯ ಮೇಲ್ಭಾಗದಲ್ಲಿರುವಂತಹ ಗುಡ್ಡಗಳಿಂದ ಕೂಡಿದ ಅಡವಿಯೋ ? ಇದೇನು ದಂಡೋ, ಎಲ್ಲ ಜಗತ್ತುಗಳನ್ನು ತೇಲಿಕೊಂಡು ಹೋಗುವ ಸಾಗರವೋ ? ಇದನ್ನು ನಾನು ತಿಳಿಯಲಾರೆನು ! ಎಂದು ಉತ್ತರ ಕುಮಾರನು ಅಂದನು.

೩೮) ಈ ಸೈನ್ಯವನ್ನು ನೋಡುವ ಸಾಮರ್ಥ್ಯವು ಕಣ್ಣುಗಳಲ್ಲಿಲ್ಲ; ಇದರ ನೆಲೆಯನ್ನು ಕಂಡು ಹಿಡಿಯುವ ಸಾಮರ್ಥ್ಯವು ಮನಸ್ಸಿನಲ್ಲಿಲ್ಲ

ಎಂದ ಮೇಲೆ ಸುಮ್ಮನೆ ದೇಹಧಾರಿಗಳಾಗಿದ್ದು ಪ್ರಯೋಜನವೇನು ? ಇದರ ಅಸಾಧಾರಣತೆಯು ತಿಳಿಯಲಸಾಧ್ಯವಾದುದು. ಈ ಸೈನ್ಯವೇನಾದರೂ ಭೂಮಿಯ ಹೊಟ್ಟೆಯೊಳಗಿಂದಲೇ ಹುಟ್ಟಬಂತೋ ? ಇವರೊಡನೆ ಯುದ್ಧ ಮಾಬೇಕಾದರೆ ಆ ರುದ್ರನೇ ಸಾಕ್ಷಾತ್ತಾಗಿ ಬರಬೇಕು. ಶಿವ ಶಿವ ! ಸಾಕು ಸಾಕು. ಇನ್ನು ನಾವು ಯುದ್ಧ ಮಾಡಿ ಗೆದ್ದಂತಾಯಿತು. ! ಈ ಸೈನ್ಯಕ್ಕೆ ದೊಡ್ಡ ಸಮುಸ್ಕಾರವು ! ಎಂದನು.

೨೯) (ಹಸಿದ ಮೃತ್ಯು ದೇವತೆಯ ದಂಡಿನಲ್ಲಿ ಕುರಿಯು ದಾರಿ ತಪ್ಪಿ ಹೋದರೆ ಬದುಕುವದು ಹೇಗೆ ? ಎಲೈ ಬೃಹನ್ನಳೆಯೇ ಕುದುರೆಗಳನ್ನು ಮುಂದಕ್ಕೆ ನಡೆಯಿಸಬೇಡ, ಬಾರಕೋಲನ್ನು ತೆಗೆದಿಡು ,ನಾವು ಮುಂದಕ್ಕೆ ಚಲಾಯಿಸುವದಕ್ಕಾದೀತೇ ? ಪ್ರಳಯ ಕಾಲದ ಮುಸುಕನ್ನು ತೆಗೆಯಲು ಯಾರಾದರೂ ಮುಂದುವರೆಯಬಲ್ಲರೇ ? ಕೌರವರ ಸೈನ್ಯಕ್ಕೆ ಸಮನಾದ ದಂಡು ಇನ್ನಾರದಿರುವದು ? ಇನ್ನು ಮೇಲೆ ಬೇಗನೆ ಪಟ್ಟಣದ ಕಡೆಗೆ ರಥವನ್ನು ಹೊರಡಿಸು ಎಂದನು. )

೪೦) ಆ ಸೈನ್ಯದ ಹತ್ತರ ಹತ್ತರ ಬಂದಹಾಗೆ ಉತ್ತರ ಕುಮಾರನ ಮೈಯು ಹೆಚ್ಚು ಜಡವಾಯಿತು. ಮೇಲಿಂದಮೇಲೆ ಮೈ ಮುರಿಯ ಹತ್ತಿದನು.; ಮೈಮೇಲೆ ರೋಮಾಂಚನಗಳೆದ್ದವು; ದೇಹದಲ್ಲಿ ಕಾವು ಹೆಚ್ಚಾಯಿತು. ; ಗದಗದ ನಡಗ ಹತ್ತಿದನು. ದುಃಖದಿಂದಲೂ ಭಯದಿಂದಲೂ ಕಾತರನಾದನು; ಅತಿಶಯವಾದ ಅಂಜಿಕೆಯ ಸಂತಾಪದಿಂದ ಅವನ ಗಂಟಲು ಆರಿ ತುಟಿಗಳು ಒಣಗಿದವು; ಇಂತಹ ತಾಪದಿಂದ ಕಣ್ಣಿನ ಎವೆಗಳು ಕರಕಾದವು. ಆಗ ಉತ್ತರ ಕುಮಾರನು ತನ್ನ ಕೈಗಳಿಂದ ಮೋರೆಯನ್ನು ಮುಚ್ಚಿಕೊಂಡನು.

೪೧) ಎಲೈ ಸಾರಥಿಯೇ ಯಾಕೆ ಸುಮ್ಮನೆ ರಥವನ್ನು ಮುಂದಕ್ಕೆ ಹೊಡೆದು ನನ್ನ ಕುತ್ತಿಗೆಯನ್ನು ಕೊಯ್ಯುತ್ತಿಯೇ ? ಸಾಕು ಬಿಡು ಈ ಯುದ್ಧದ ಉದ್ಯೋಗವನ್ನು ! ಏನು ಹುಡಗಾಟಿಕೆಯೋ ? ನಿನ್ನ ಕಣ್ಣುಗಳೇನು ಒಡೆದು ಹೋಗಿವೆಯೋ ? ತೆರೆದು ನೋಡು ಈ ಅದ್ಭುತವಾದ ದಂಡನ್ನು ! ದೇವತೆಗಳು ಕೂಡಾ ಇದರ ಸಂಗಡ ಕಾದಲಾರರು. ನಿನಗೆ

ಸ್ವಲ್ಪು ಸಾರಾಸಾರಾ ವಿಚಾರವಿದ್ದಂತೆ ತೋರುವದಿಲ್ಲ. ಸಾಕು ಬಿಡಿನ್ನು! ಕುದುರೆಗಳ ಕಡಿವಾಣವನ್ನು ತಿರುಗಿಸು. ಕುದುರೆಗಳನ್ನು ಹೊರಳಿಸು ಎಂದನು.

೪೨) ಉತ್ತರನಾಡಿದ ಮಾತುಗಳ ಕಡೆಗೆ ವಿಶೇಷವಾಗಿ ಲಕ್ಷಕೊಡದೆ ಅರ್ಜುನನು ರಥವನ್ನು ನಾಲ್ಕೆಂಟು ಹೆಜ್ಜೆ ಮುಂದಕ್ಕೆ ನಡೆಯಿಸಿದನು. ಆಗ ಉತ್ತರನ ಕೈಗಳು ನಡಗ ಹತ್ತಿದವು; ಮತ್ತು ಕೈಯಲ್ಲಿದ್ದ ಬಿಲ್ಲುಬಾಣಗಳು ಕೆಳಗೆ ಬಿದ್ದವು. ಎಲೈ ವೈರಿಗಳನ್ನು ಹೊಡೆಯುವದರಲ್ಲಿ ಜಾಣನಾದ ಸಾರಥಿಯೇ ಹೀಗೇಕೆ ಮಾಡುವೆ ? ರಥವನ್ನು ತಿರುಗಿಸೆಂದು ಹೇಳಿದ ನಾನು ನಿನ್ನ ವೈರಿಯೇನು ? ನಿನ್ನ ಒಡೆಯನಲ್ಲವೇ ? ಹೀಗಿದ್ದು ನಿನ್ನ ಒಡೆಯನಿಗೇ ಅಹಿತವನ್ನು ಬಯಸುವೇಯಾ ? ಒಳ್ಳೆಯದಾಯಿತು ! ಎಂದು ಉತ್ತರನು ಮಾತನಾಡಿದನು.

೪೩) ಉತ್ತರನ ಮಾತನ್ನು ಕೇಳಿ ನಗುತ್ತ ಅರ್ಜುನನು ಮತ್ತೇ ರಥವನ್ನು ನಾಲ್ಕಾರು ಹೆಜ್ಜೆ ಮುಂದಕ್ಕೆ ಹೊಡೆದನು. ಆಗ 'ಅಯ್ಯೋ ಈ ಸಾರಥಿಯು ನನ್ನನ್ನು ಕೊಲ್ಲುತ್ತಾನೆ' ಎಂದು ಅಂದುಕೊಂಡು ತನ್ನ ಕಚ್ಚೆಯನ್ನು ಏರಿಸಿಕೊಳ್ಳುತ್ತ ರಥದ ಹಿಂಭಾಗಕ್ಕೆ ಬಂದು ನಿಂತು ಒಮ್ಮೆಗೆ ಕೆಳಗೆ ಹಾರಿದನು. ಮತ್ತು 'ಉಳಿದೆನು' ಅನ್ನುತ್ತ ಜೊಕ್ಕದಲೆಯಿಂದ ಒಂದೇ ಸವನೆ ನೆಟ್ಟಗೆ ಓಡಿದನು.

೪೪) ಅರ್ಜುನನು ಉತ್ತರನನ್ನು ನೋಡಿದನು. ಆ ಕಿಡಿಗೇಡಿಯು ಕೆದರಿದ ತಲೆಕೂದಲಗಳನ್ನು ಹಾಗೆಯೇ ಬಿಟ್ಟುಕೊಂಡು ದಿಕ್ಕುಗಾಣದೆ ಓಡುತ್ತಿದ್ದನು, 'ಎಲೆಲೆ, ಪಾಪಿಯು ಓಡಿ ಹೋದನು. ಹಿಡಿಯಬೇಕೆಂದೆನುತ್ತ ಕೂಡಲೇ ಅವನನ್ನು ಹಿಡಿಯುವದಕ್ಕಾಗಿ ಹಿಂಬಾಲಿಸಿದನು. ಆದರಿಂದ ಭೂಮಿ ನಡುಗಿತು. ಆದಿಶೇಷನು ಕುಗ್ಗಿದನು. ಅತ್ತ ಕೌರವರ ದಂಡಿನವರು ಆ ಉತ್ತರನನ್ನು ಕಂಡು ನಗೆಬಂದು ನಗೆಯೆಂಬ ಸಮುದ್ರದಲ್ಲಿ ಮುಳುಗಿದರು.

೪೫) ಎಲೆಲೆ ! ಯುದ್ಧರಂಗದಲ್ಲಿ ಹೋರಾಡುವದಕ್ಕೆ ಬಂದ ಈ ವೀರನ ಸಾಮರ್ಥ್ಯವನ್ನು ನೋಡಿರಿ ! ಶಿವಶಿವಾ ಅವನನ್ನು ಬೆನ್ನಟ್ಟಿ

ಓಡುವ ವೀರನು ಮಾತ್ರ ಯಾವನೋ ಏನೋ! ದಿಟ್ಟನಾಗಿ ತೋರುತ್ತಾನೆ! ಅವನಾವನೋ ತಿಳಿಯದು! ಆದರೂ ಶ್ರೇಷ್ಠ ಪುರುಷನಾಗಿದ್ದಾನೆ. ರೂಪವನ್ನು ನೋಡಿದರೆ ಅರ್ಜುನನಂತೆ ಕಾಣುತ್ತಾನೆ. ಎಂದು ಶತ್ರು ಸೈನ್ಯದಲ್ಲಿ ಗುಣುಗುಟ್ಟಿದಡು.

೪೬) ಎಲೈ ಉತ್ತರನೇ ಕೇಳು, ಹೋಗಬೇಡ ನಿಲ್ಲು ಇಷ್ಟಾಗಿಯೂ ಹೋದರೆ ನಿನ್ನ ತಲೆಯನ್ನೇ ತುಂಡರಿಸುವೆನು. ಹೀಗೆ ಹೇಳುತ್ತ ಅರ್ಜುನನು ಅವನನ್ನು ಹಿಂಬಾಲಿಸಿದನು. 'ಅಯ್ಯೋ ಅವನೇನು ನನ್ನ ಮರಣ ದೇವತೆಯೋ? ಸಾರಥಿಯೋ? ಈ ಪಾಪಿಷ್ಟನನ್ನು ನಾನು ಯಾವ ಕಡೆಯಿಂದ ಗಂಟು ಹಾಕಿಕೊಂಡೆನು? ಎನ್ನುತ್ತ ಉತ್ತರನು ಹೊರಳಿ ನೋಡಿ ಮತ್ತೆ ಹಾಗೆಯೇ ಮುಂದೋಡಹತ್ತಿದನು.

೪೭) ಅರ್ಜುನನು ನೂರು ಹೆಜ್ಜೆಗಳಲ್ಲಿಯೇ ಉತ್ತರನ ಹಿಂದಿಂದೆ ಹೋಗಿ ಅವನನ್ನು ಹಿಡಿದನು. 'ಎಲೇ ಇದನ್ನೇನು ಮಾಡಿದೆ. ನೀನು ನಿಜವಾಗಿ ಕ್ಷತ್ರಿಯನಿರುವಯೋ? ಸೂಳೆಗೆ ಹುಟ್ಟಿರುವೆಯೋ? ಆಗ ಹೆಂಗಸರ ಎದುರಿದಲ್ಲಿ ದಿಟ್ಟತನದಿಂದ ಪೊಳ್ಳು ಹರಟೆಯನ್ನು ಹೊಡೆದೆ. ಈಗ ವೈರಿಗಳ ಎದುರಿನಲ್ಲಿ ಹೇಡಿಯಾಗಿ ಓಡಿಹೋಗುತ್ತಿರುವ ನೀನು ವಿರಾಟರಾಜನ ವಂಶದ ಕೀರ್ತಿಯನ್ನೇ ಹಾಳು ಮಾಡಿಬಿಟ್ಟಿ ಎಂದನು ಅರ್ಜುನನು.

೪೮) ಉತ್ತರ ಕುಮಾರನು ಹಲ್ಕಿರಿದನು. ಬಾಯಲ್ಲಿ ಬೆರಳನ್ನು ಇಟ್ಟು ಕಚ್ಚಿದನು; ತಲೆಯನ್ನು ತಗ್ಗಿಸಿ ಈ ರೀತಿಯಾಗಿ ಹೇಳಿಕೊಂಡನು. 'ಎಲೈ ಸಾರಥಿಯೇ, ದಯಮಾಡಿ ನನ್ನನ್ನು ತಿರುಗಿ ಕಳುಹಿಸಿಕೊಡು. ಮತ್ತು ನನ್ನ ಪ್ರಾಣವನ್ನು ಉಳಿಸು. ನಿನ್ನ ಹೊಟ್ಟೆಯಲ್ಲಿ ಹುಟ್ಟಬಂದವನೆಂದು ತಿಳಿ. ಯುದ್ಧದಲ್ಲಿ ಎದುರಾಗಿ ನಿಂತು ಈ ಮಹಾ ಸೈನ್ಯವನ್ನು ಭೇದಿಸುವವರು ಯಾರಾದರೂ ಇರಬಹುದೇ? ಅನ್ಯರಿಂದ ನನ್ನನ್ನು ಕೊಲ್ಲಿಸಬೇಡ; ಬೇಕಾದರೆ ಇಕೋ, ನೀನೇ ಈ ಕತ್ತಿಯಿಂದ ನನ್ನನ್ನು ಕೊಲ್ಲು ಎಂದನು.

೪೯) ಉತ್ತರನ ಸ್ಥಿತಿಯನ್ನು ನೋಡಿ, ಅರ್ಜುನನು ಮನಸ್ಸಿನಲ್ಲಿಯೇ ಹೊಟ್ಟೆಯು ಒಡೆದು ಹೋಗುವಂತೆ ನಕ್ಕನು. ಆಮೇಲೆ ಹೀಗೆ ಗದ್ದರಿಸಿದನು. 'ಎಲೇ, ನೀನು ಓಲಗದಲ್ಲಿ ಕಮಲ ಮುಖಿಯರಾದ ಹೆಂಗಸರ ಮುಂದೆ ಬಾಯಿಗೆಬಂದಂತೆ ಗಳುಹಿದೆ. ಈಗ ಯುದ್ಧದಲ್ಲಿ ನಿನಗೆ ಎನಾಗಿದೆ ? ಶತ್ರು ಸೈನ್ಯದ ಸಂಗಡ ಹೊಡಪಾಡದೇ ಹೋಗುವೆಯಾ ? ಬರಿ ಕೂಗುವ ನಾಡನರಿ ಬಡಬಡಿಸಿದರೆ ಏನಾಯಿತು ? ನನ್ನ ಮುಂದೆ ಹೀಗೆ ಹಲ್ಲು ತೆಗೆದು ನಿಂತರೆ ನಾನು ಬಿಡುವೆನೇ ? ಯುದ್ಧ ಮಾಡು ನಡೆಯಂದನು.

೫೦) ಎಲೈ ಉತ್ತರಕುಮಾರನೇ, ಕೇಳು, ಯುದ್ಧದಲ್ಲಿ ಹಿಮ್ಮೆಟ್ಟಿ ಓಡಿದರೆ ಒಂದೊಂದು ಹೆಜ್ಜೆಗೂ ಮಹಾ ಪಾತಕವೇ ಫಲವು; ಅದರಂತೆಯೇ ಯುದ್ಧದಲ್ಲಿ ಮುಂದಾಗಿ ನಡೆಯಹತ್ತಿದರೆ ಒಂದೊಂದು ಹೆಜ್ಜೆಗೂ ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯವು ದೊರಕುವದು. ಯುದ್ಧದಲ್ಲಿ ಮಡಿದರೆ ದೇವಲೋಕದಲ್ಲಿದ್ದ ಅಪ್ಸರ ಸ್ತ್ರೀಯರು ತೊತ್ತುಗಳಂತೆ ಸೇವೆ ಮಾಡುವರು; ದೇವೇಂದ್ರನು ಈ ಪೃಥ್ವಿಯ ಸ್ತುತಿ ಮಾಡುವನು ಮತ್ತು ವೀರ ಸ್ವರ್ಗ ಪ್ರಾಪ್ತವಾಗುವದು.

೫೧) ಎಲೈ ಅರ್ಜುನನೇ ಯುದ್ಧರಂಗದಲ್ಲಿ ಓಡಿಹೋದದಕ್ಕಾಗಿ ಪಾಪವೊದಗಿದರೆ, ಬ್ರಾಹ್ಮಣರು ಅದನ್ನು ಹೋಗಲಾಡಿಸುತ್ತಾರೆ. ಅಶ್ವಮೇಧ ಯಜ್ಞದ ಪುಣ್ಯವು ಬೇಕಾದರೆ, ಆ ಯಜ್ಞವನ್ನೇ ಪ್ರತ್ಯಕ್ಷವಾಗಿಯೇ ಮಾಡಲಿಕ್ಕಾಗುತ್ತದೆ. ಇನ್ನು ಆ ದೇವ ಲೋಕದ ಸ್ತ್ರೀಯರು ನಮಗೇನೂ ಬೇಕಾಗಿಲ್ಲ. ನಮ್ಮ ಅರಮನೆಯ ಹೆಂಗಸರೇ ಸಾಕು. ನಮ್ಮ ಅರಸೊತ್ತಿಗೆಯೇ ನಮಗೆ ಇಂದ್ರ ಪದವಿಯು. ಆದುದರಿಂದ ದಯಮಾಡಿ ನಮ್ಮನ್ನು ತಿರುಗಿ ಕಳುಹಿಸಿಬಿಡು, ಎಂದು ಉತ್ತರನು ಮಾತನಾಡಿದನು.

೫೨) ಎಲೆ ಬೃಹನ್ನಳೆಯೇ, ಕೇಳು, ಅರಮನೆಯಲ್ಲಿ ಹೋದಬಳಿಕ ನಾನು ನಿನಗೆ ಒಂದು ಉಂಬಳಿಯನ್ನು ಕೊಡಿಸುವೆನು. ಆನೆ, ಕುದುರೆಗಳನ್ನು ಕೊಡಿಸುವೆನು. ಮತ್ತು ಮುತ್ತಿನ ಸರವೇ ಮೊದಲಾದ ಆಭರಣ

ಗಳನ್ನು ಕೊಡಿಸುವೆನು; ಸುಂದರಿಯರಾದ ಸ್ತ್ರೀಯರನ್ನು ಕೊಡಿಸುವೆನು ನೋಡು ಬೃಹನ್ನಳೆಯೇ, ನಮ್ಮ ಅಪ್ಪನು ನನಗೆ ಆಶ್ರಯ ಕೊಟ್ಟು ಸಂವರಕ್ಷಣೆ ಮಾಡಿರಲು ನೀನು ಈ ರೀತಿಯಾಗಿ ನನಗೆ ಕೈಯನ್ನು ತೋರಿಸಬೇಕೇ ? ನಿನ್ನದು ಎಂತಹ ಕಲ್ಲು ಮನಸ್ಸು ! ಎಂದು ಉತ್ತರನು ಕೇಳಲು ಅರ್ಜುನನು ಮತ್ತೆ ಹೇಳಿದನು.

೫೩) ಎಲೈ ಉತ್ತರಕುಮಾರನೇ ಕೇಳು, ಈಗಾಗಲಿ ಹಿಂದಾಗಲಿ ಮುಂದಾಗಲಿ, ಯಾವ ಕಾಲದಲ್ಲಿಯೂ ಅರಸನ ಹೊಟ್ಟೆಯಲ್ಲಿ ಹುಟ್ಟಿ ಬಂದವರಲ್ಲಿ ಕೇವಲ ದೇಹದ ಮೇಲಿನ ಮಮತೆಯಿಂದ ರಣದಿಂದ ಹಿಮ್ಮೆಟ್ಟಿದವರು ಒಬ್ಬರೂ ಇಲ್ಲ, ಇಷ್ಟೇ ಅಲ್ಲ; ಅಂತಹವರಿಗೆ ಯುದ್ಧ ವೆಂದರೆ ಒಂದು ಹುರುಪಿನ ವಿಷಯ, ಎಂದಮೇಲೆ ನೀನು ಇಂತಹ ಪೊಳ್ಳು ಮಾತುಗಳನ್ನು ಆಡಬಹುದೇ ? ಥೂ ! ನೀನು ಅರಸೊತ್ತಿಗೆಗೆ ಹೊರತಾದವನು ಆಗಲಿ, ರಥದ ಭಾರವನ್ನಾದರೂ ಹೊರು ನಡೆ, ಯುದ್ಧ ವನ್ನು ಆಡಬೇಡಯೆಂದನು.

೫೪) ನೀನು ರಥವನ್ನು ನಡೆಯಿಸು, ಶತ್ರು ಸೈನ್ಯದಲ್ಲಿ ಹೊಕ್ಕು ಯುದ್ಧ ಮಾಡುವೆನು. ಅಯ್ಯೋ, ಇನ್ನು ವ್ಯರ್ಥವಾದ ಈ ವಿವಾದವನ್ನು ಬಿಡು, ನನ್ನ ಸಾರಥಿಯಾಗು, ಹೀಗೆ ಅರ್ಜುನನು ಹೇಳಿದಕೂಡಲೆ– 'ಎಲೆ ಕ್ಷುದ್ರನೇ, ನೀನು ಬೃಹನ್ನಳೆ, ನೀನು ಯಾವ ಯಾವ ಅರಸರೊಡನೆ ಯುದ್ಧಮಾಡಿ ವಿಜಯ ಸಂಪಾದನೆ ಮಾಡಿರುತ್ತೀ, ಯುದ್ಧವೆಂದರೆ ನಾಟ್ಯವಿದ್ಯೆಯಲ್ಲ ತಿಳಿಯಿತೇ ? ಎಂದು ಉತ್ತರನು ಮಾತನಾಡಿದನು.

೫೫) ಎಲೈ ಉತ್ತರನೇ, ಸುಮ್ಮನೆ ಬಾಯಿಮುಚ್ಚು, ಇಲ್ಲವಾದರೆ ನಿನ್ನ ಕಟಬಾಯಿಯನ್ನು ಸೀಳಿಬಿಡುವೆನು. ನಿನ್ನ ಎದುರಿನಲ್ಲಿಯೇ ಈ ಶತ್ರು ಸೈನ್ಯವೆಲ್ಲವನ್ನು ಗೆಲ್ಲುವೆನು 'ಆಮೇಲೆ ಬೇಕಾದರೆ ನಗುವಿಯಂತೆ' ಹೀಗೆ ಶತ್ರುಗಳಿಗೆಲ್ಲ ಭಯವನ್ನುಂಟುಮಾಡುವಂತಹ ಆ ಅರ್ಜುನನು ಮಾತನಾಡಿದನು; ಮತ್ತು ಆ ಉತ್ತರನ ಜಂಡಿನಮೇಲೆ ಕೈಕೊಟ್ಟು ಬಾಗಿಸಿ ದಬ್ಬುತ್ತ ತಂದು ರಥದ ಮೇಲೆ ಕುಳ್ಳರಿಸಿದನು.

೫೭) ಎಲೈ ಉತ್ತರನೇ, ಹೆದರಬೇಡ, ಯುದ್ಧದಲ್ಲಿ ಹಗೆಗಳನ್ನು ಎದುರಿಸುವೆನು ಸೈನ್ಯದ ನೇಲೆ ಬಿದ್ದು ಅಲ್ಲಿರುವ ಸೈನಿಕರನ್ನು ಕೊಂದು ಯಮನ ಲೋಕಕ್ಕೆ ಕಳಸುವೆನು, ನೀನು ಕೈಕಾಲು ಕಳೆದುಕೊಂಡು ಅಡ್ಡತಿಡ್ಡವಾಗಿ ಎಳೆದಾಡಬೇಡ, ಧೈರ್ಯತಂದುಕೊಂಡು ನನ್ನ ಸಾರಥಿಯಾಗೆಂದು ಹೇಳುತ್ತ ಸಮೀಪದ ಬನ್ನಿಯ ಗಿಡದ ಪೊದೆಯ ಕಡೆಗೆ ಬಂದರು.

೫೭) ಎಲೈ ಉತ್ತರ ಕುಮಾರನೇ ಈ ಗಿಡವನ್ನು ಹತ್ತು, ಅಲ್ಲಿ ಪಾಂಡವರು ತಮ್ಮ ಶಸ್ತ್ರಗಳನ್ನು ಇಟ್ಟು ಹೋಗಿದ್ದಾರೆ. ದುಷ್ಟರನ್ನು ಸಂಹಾರಮಾಡುವಲ್ಲಿ, ಸಜ್ಜನರನ್ನೂ, ಆಶ್ರಿತರನ್ನೂ ಸಂರಕ್ಷಿಸುವಲ್ಲಿಯೂ, ಮೊರೆಹೊಕ್ಕವರಿಗೆ ಕ್ಷಮೆ ಮಾಡುವದರಲ್ಲಿಯೂ ಈ ಶಸ್ತ್ರಗಳು ಅವಶ್ಯಕವಾಗಿವೆ. ಆದ್ದರಿಂದ ನೀನು ಅವುಗಳನ್ನು ತೆಗೆದುಕೊಡು ಎಂದು ಹೇಳಲಾಗಿ ಅದಕ್ಕೆ ಉತ್ತರಕುಮಾರನು, ಇದೇನು ಬೃಹನ್ನಳೆಯೇ, ಮರದ ಮೇಲೆ ಹೆಣವಿದೆ, ಅರಸುಮಕ್ಕಳಾದವರು ಹೆಣವನ್ನು ಮುಟ್ಟಬಾರದು. ನೀನು ಮತ್ತೇನಾದರೂ ಹೇಳಿದರೂ ಅದನ್ನು ನಾನು ತಪ್ಪದೆ ಮಾಡುವೆನೆಂದನು.

೫೮) ಎಲೈ ಉತ್ತರನೇ ಅಲ್ಲಿರುವದು ಹೆಣವಲ್ಲ. ತೊಗಲನ್ನು ಹೊಚ್ಚಿ ಸುತ್ತಮುತ್ತಲಿಂದ ನೋಡಿದರೆ ಕಾಣದ ಹಾಗೆ ಬಿಗಿದು ಪಾಂಡವರು ತಮ್ಮ ಶ್ರೇಷ್ಠವಾದ ಆಯುಧಗಳನ್ನು ಇಲ್ಲಿ ಇಟ್ಟಿದ್ದಾರೆ. ನೀನು ಅವುಗಳನ್ನು ತೆಗೆ,ಎಂದು ಅರ್ಜುನನು ಹೇಳಲು, ಉತ್ತರಕುಮಾರನು ಧೋತರದ ಸೆರಗನ್ನು ಏರಿಸಿಕೊಂಡು ಹೆದರಿಕೆಯಿಂದ ತುದಿಯವರೆಗೆ ಗಿಡವನ್ನು ಏರಿದನು. ಹಗ್ಗಗಳನ್ನು ಹರಿದ ಕೂಡಲೇ ಒಳಗಿರುವ ಕೈದುಗಳು ಕಾಣಿಸಹತ್ತಿದವು. ಆಗ ಅವನ ಎದೆ ದಸ್ಸೆಂದು ಬಹಳವಾಗಿ ಹೆದರಿದನು.

೫೯) ಇದೇನು ಭಯಂಕರವಾದ ಸರ್ಪವೋ ಅಥವಾ ಕತ್ತಿಯೋ? ಬಾಣಗಳ ಸಮೂಹವೋ ಪ್ರಳಯಕಾಲದಲ್ಲಿ ಬೆಂಕಿಯಿಂದ ಉತ್ಪನ್ನವಾದ ಉರಿಯೋ? ಇವೇನು ಆಯುಧಗಳೋ ಪ್ರಳಯಕಾಲದ ಯಮನ ದವಡೆಗಳೋ? ಇವುಗಳನ್ನು ಶಕ್ತಿಯುಕ್ತಿಯಲ್ಲಿ ನೋಡಬೇಕೆಂದರೆ ಕಣ್ಣು

ಗುಡ್ಡಿಗಳು ಬೆಂದು ಹೋಗುತ್ತಿವೆ. ಎಲೈ ಬೃಹನ್ನಳಿಯೇ ನನ್ನನ್ನು ಕೊಂದೆ; ನನ್ನನ್ನು ಸರ್ವ ನಾಶಮಾಡಿದೆ ಎಂದು ಉತ್ತರನು ಗಡಗಡ ನಡುಗ ಹತ್ತಿದನು.

೬೦) ಎಲೈಪಾಪಿಷ್ಠನೇ, ಹಾವಿನವಿಷವನ್ನು ಎಂದಾದರೂ ಮುಟ್ಟಲು ಸಾಧ್ಯವಾದೀತೇ? ಇವು ಆಯುಧಗಳೇನು? ಭಯಂಕರವಾದ ಸಿಡಲಿನ ಸಾಲುಗಳೆಂಬಂತೆ ನನಗೆ ತೋರುತ್ತವೆ, ಇವುಗಳನ್ನು ತೆಗೆದು ಕೊಳ್ಳುವದಕ್ಕಾಗಿ ಕೈಯನ್ನು ಮುಂದೆ ಚಾಚಬೇಕೆಂದರೆ ಬಹಳ ಹೆದರಿಕೆ ಯಾಗುತ್ತಿದೆ. ಎಲೈ ಸಾರಥಿಯೇ, ನನ್ನನ್ನು ಉಳಿಸು. ಹೀಗೆ ಉತ್ತರನು ಮಾತನಾಡಲು ಅರ್ಜುನನು—ಛೀ, ತೆಗೆ! ಹೀಗೇಕೆ ನಡುಗುವೆ? ಅರ್ಜು ನನ್ನು ಧ್ಯಾನಿಸು, ಆ ಮೇಲೆ ನೀನು ನಿನ್ನ ಕೈಯನ್ನು ಚಾಚು ಅಂದರೆ ನಿನ್ನ ಕೈಗಳಿಗೆ ಶಸ್ತ್ರಗಳು ಬರುತ್ತವೆ. ಅವುಗಳನ್ನು ತೆಗೆದುಕೊಡು ಎಂದನು.

೬೧) ಆಗ ಉತ್ತರನು ತನ್ನ ಬಾಯಿಂದ ಒಂದು ತರಹದ ಧ್ವನಿ ಯನ್ನು ತೆಗೆದು ಶಕ್ತಿಯನ್ನು ಉಪಯೋಗಿಸಿ ಒತ್ತುತ್ತಲೂ, ಮೈವುಬ್ಬಿಸಿ, ತೆಕ್ಕೆ ಹಿಡಿಯುತ್ತಲೂ, ಗಾಂಡೀವಿ ಧನಸ್ಸನ್ನು ಹೇಗಾದರೂ ಮಾಡಿ ಬೃಹನ್ನಳೆಯ ಕೈಯ ವರೆಗೆ ಮುಟ್ಟಿಸಿದನು. ಅವನ ಮೈಯೆಲ್ಲ ದಣಿವಿನಿಂದ ಬೆವತಿತು. ಜೋರಿನಿಂದ ಹಲ್ಲು ದವಡೆಗಳನ್ನು ಒತ್ತುತ್ತ ಉಳಿದ ಬಿಲ್ಲು ಗಳನ್ನು ಒಂದೊಂದಾಗಿ ತೆಗೆಯಹತ್ತಿದನು. ಮರದ ಮೇಲೆ ಸಾಗರ ಬಿದ್ದು ನೋಡಿ ಅವುಗಳನ್ನು ಅರ್ಜುನನ ಕೈಗೆ ಕೊಡುತ್ತಿದ್ದನು, ಮತ್ತು ಆಯಾಸ ದಿಂದ ನಿಟ್ಟಿಸಿರುಬಿಡುತ್ತಿದ್ದನು. ಮತ್ತು ಅವನ ಡೊಕ್ಕೆಗಳೂ ಹಾರ ಹತ್ತಿದವು.

೬೨) ಎಲೈ ಸಾರಥಿಯೇ, ಈ ಬಿಲ್ಲು ಯಾವನ ಕೈಗೆ ತಕ್ಕದಾಗು ವದು? ಈ ದೊಡ್ಡ ದೊಡ್ಡ ಬಾಣಗಳ ಸಮೂಹವು ಯಾರ ವಶವರ್ತಿ ಯಾಗಿರುವದು? ಉಳಿದ ಈ ಬಿಲ್ಲುಗಳು ಯಾರವು? ಇವುಗಳನ್ನು ಯಾರು ಯುದ್ಧದಲ್ಲಿ ಹಿಡಿಯುವರು? ಈ ಹೆಚ್ಚಿನ ಆಯುಧಗಳು ಯಾರ ಯಾರ ಕೈಗೆ ಸರಿಯಾಗುವವು? ಈ ಎಲ್ಲ ಸಂಗತಿಗಳನ್ನು ಚೆನ್ನಾಗಿ ಹೇಳಿ ನನ್ನ ಮನಸ್ಸಿನಲ್ಲಿ ಉಂಟಾದ ಸಂಶಯವನ್ನು ದೂರ ಮಾಡು ಎಂದನು.

೭೩) ಎಲೆಲೆ ಉತ್ತರನೇ, ನೋಡು, ಈ ದೊಡ್ಡ ಧನಸ್ಸಿನ ಹೆಸರು ಗಾಂಡೀವ. ಇದು ಅರ್ಜುನನದು ಇರುತ್ತದೆ.; ಇದು ಧರ್ಮರಾಯನ ಬಿಲ್ಲು; ಇದು ಭೀಮಸೇನನದು.; ಇದು ನಕುಲನದು ಮತ್ತು ಸಹದೇವನದು. ಈ ಬಾಣವು ಅರ್ಜುನನದು. ಹೀಗೆ ಬೃಹನ್ನಳೆಯು ಹೇಳಿದನು.

೭೪) ಎಲೈ ಬೃಹನ್ನಳೆಯೇ ಯಾರು ನೀನು? ಅರ್ಜುನನೋ? ನಕುಲನೋ? ಭೀಮನೋ? ಧರ್ಮರಾಜನೋ? ಅಲ್ಲವಾದರೆ ಅವರ ಆಪ್ತೇಷ್ಟರಲ್ಲಿ ಒಬ್ಬನೋ? ಎಲೈ ಧೈರ್ಯಶಾಲಿಯೇ, ದಯಮಾಡಿ ಹೇಳು, ನಿನ್ನನ್ನು ಬೇಡಿಕೊಳ್ಳುತ್ತೇನೆ. ಪಾಂಡವರ ಈ ಆಯುಧ ಸಮೂಹದ ಇಷ್ಟೊಂದು ಸಂಗತಿಯು ನಿನಗೆ ಇಷ್ಟು ಚೆನ್ನಾಗಿ ಗೊತ್ತಿರುವ ಬಗೆ ಹೇಗೆ? ಎಂದನು.

೭೫) ಎಲೈ ಉತ್ತರನೇ, ಹೇಳುತ್ತೇನೆ ಕೇಳು, ನಾನು ಅರ್ಜುನನು. ಅಡಿಗೆಯವನಾದ ವಲಲನು ಭೀಮಸೇನನು. ಯತಿಯಾದ ಕಂಕನೇ ಧರ್ಮರಾಜನು. ನಿಮ್ಮ ಆಕಳುಗಳನ್ನು ಕಾಯುತ್ತಿದ್ದವನು ಸಹದೇವನು. ಕುದುರೆಯ ಸವಾರನಾಗಿ ನಿಮ್ಮಲ್ಲಿ ಇದ್ದವನು ನಕುಲನು. ತಾಂಬೂಲ ಕರಂಡವನ್ನು ಹಿಡಿದುಕೊಂಡಿದ್ದವಳಾದ ಸೈರಂಧ್ರಿಯೇ ನಮ್ಮ ಐವರ ಹೆಂಡತಿಯಾದ ದ್ರೌಪದಿಯು ಎಂದನು.

೭೬) ಎಲೈ ಉತ್ತರನೇ ಕೇಳು, ನಮ್ಮ ಅಣ್ಣನಾದ ಧರ್ಮರಾಜನು ಸತ್ಯಂಸಧನು. ಅವನ ಆ ಸತ್ಯವ್ರತವನ್ನು ಊರ್ಜಿತಗೊಳಿಸುವದಕ್ಕಾಗಿ ನಾವು ವೇಷಾಂತರವನ್ನು ಮಾಡಿಕೊಂಡಿದ್ದೇವೆ. ನನಗೆ ಈ ನಪುಂಸಕ ವೇಷವು ಊರ್ವಶೀಯ ಶಾಪದಿಂದ ಬಂದಿದೆ. ಇದಕ್ಕೆ ಅಜ್ಞಾತ ವಾಸ ಅವಧಿಯು ಜೋಡಾಯಿತು. ಹೇಗಾದರೂ ಮಾಡಿ ಒಂದು ವರ್ಷಕಳೆದವು. ಯಾವ ತರಹದ ಎಡರುಗಳು ಇಲ್ಲದೇ ಕ್ಷೇಮದಿಂದ ಪಾರಾದೆವು. ಇನ್ನು ಮೇಲೆ ನಮ್ಮ ಶೂರತವನ್ನು ನೀನು ಸಂತೋಷದಿಂದ ನೋಡಬಹುದು. ಎಂದನು.

೭೭) ದುರ್ಯೋಧನನ ಸೈನ್ಯದ ಗಂಟಲದ ಬಳೆಯನ್ನು ಮುರಿಯುವಂತೆ ತನ್ನ ಕೈಯೊಳಗಿನ ಬಳೆಗಳನ್ನು ಕಸುವಿನಿಂದ ಒತ್ತಿದನು. (ಹೆಚ್ಚಿದನು) ಅತಿಶಯಸಾಹಸ ಉಳ್ಳವನಾದ ಆ ವೀರನು ಮಲ್ಲಗಂಟುಕಟ್ಟಿಕೊಂಡು

ರೇಶ್ಮೆಯ ಧೋತರನನ್ನು ಉಟ್ಟನು. ತಲೆಯ ಮೇಲೆ ಇಟ್ಟುಕೊಂಡಿದ್ದ ಹೆರಳಿನ ಕೂದಲಗಳನ್ನು ತೆಗೆದೂಗಿದನು. ಕುಂಕುಮ ತಿಲಕವನ್ನು ಬರೆಸಿಕೊಂಡನು. ಕಿರಿದಾದ ಕಟ್ಟುಳ್ಳಂತಹ ಕಠಾರಿಗಳ ಸಮೂಹಗಳಲ್ಲಿ ಹೊಳೆಯುತ್ತಿರಲು, ಅರ್ಜುನನು ಪುರುಷ ವೇಷದಿಂದ ಮೆರೆಯ ಹತ್ತಿದನು.

೬೮) ಆಮೇಲೆ ಅರ್ಜುನನು ತೇರಿಗೆ ಕುದುರೆಗಳನ್ನು ಹೂಡಿದನು. ಕಪಿಗಳಲ್ಲಿ ಶ್ರೇಷ್ಠನಾದ ಹನುಮಂತನು ಅಧಿಷ್ಠಾನವನ್ನು ಪಡೆಯುವಂತೆ ಭಕ್ತಿ ಪೂರ್ವಕವಾಗಿ ಅವನ ಧ್ಯಾನಮಾಡಿದನು. ಕೈಯಲ್ಲಿ ಬಾರಕೋಲನ್ನು ತೆಗೆದುಕೊಂಡನು; ಕಾಲಲ್ಲಿ ಜೋಡುಗಳನ್ನು ಮೆಟ್ಟಿದನು. ವಜ್ರದಿಂದ ಮಾಡಿದ ಶ್ರೇಷ್ಠವಾದ ಕವಚಗಳನ್ನು ತೊಟ್ಟುಕೊಂಡನು. ದೊಡ್ಡ ದನಿಯಿಂದ ಸಿಂಹನಾದವನ್ನು ಮಾಡಿದನು.; ಮತ್ತು ಬಿಲ್ಲನ್ನು ತೆಗೆದುಕೊಂಡು ಹೆದೆಯನ್ನೇರಿಸಿದನು.

೬೯) 'ಅರಸನಾದ ಧರ್ಮರಾಯನು ದೀರ್ಘಾಯುಷವಾಗಲಿ, ಎಂದು ಅರ್ಜುನನು ಉದ್ಘೋಷಿಸಿದನು.; ಮತ್ತು ಕೈದುಗಳನ್ನು ವೊಡಮುಟ್ಟನು. ಆಮೇಲೆ ಗಾಂಡೀವ ಧನಸ್ಸನ್ನು ತೆಗೆದುಕೊಂಡು ಟಂಕಾರ ಮಾಡಿದನು. 'ವಿರಾಟರಾಯನ ಮಗನಾದ ಉತ್ತರನ ಸಾರಥ್ಯಸಡಗರವನ್ನು ನೋಡಿರಿ' ಎಂದು ಸಾರಿದನು. ಯುದ್ಧದಲ್ಲಿ ದೊಡ್ಡ ದೊಡ್ಡ ಅಸ್ತ್ರಗಳನ್ನು ಉಪಯೋಗಿಸ ಬಲ್ಲವನಾದ ಪಾರ್ಥನು ಈ ರೀತಿಯಾಗಿ ಶತ್ರುಸೈನ್ಯಕ್ಕೆ ತನ್ನ ನಿಜರೂಪವನ್ನು ತೋರಿಸಿದನು.

## ೬. ಕೌರವರಾಯು ದಳವನು ಜಯಿಸಿದನು.

೧) ಜನಮೇಜಯ ಮಹೀಪತಿಯೇ ಕೇಳು, ಕುರುಸೇನೆಯಲ್ಲಿರುವ ಭೀಷ್ಮಾಚಾರ್ಯ ಮತ್ತು ದ್ರೋಣಾಚಾರ್ಯರು, ಅವನು ಪಾರ್ಥನೆಂಬುದನ್ನು ಅರಿತರು. ಜಯವು ಅರಿಯದಾಯ್ತು, ಸಂಶಯವು ಸುಳಿಯ ಹತ್ತಿತು. ನೂರೊಂದು ಅಪಶಕುನಗಳಾಗ ಹತ್ತಿದವು. ಇದು ಪ್ರಳಯದ ಬೀಜವು. ಅದಕ್ಕಾಗಿ ಚಿತ್ತಗೊಟ್ಟು ಕೇಳು ಭೀಷ್ಮನೇ, ಎಂದನು ದ್ರೋಣಾಚಾರ್ಯನು.

೨) ಅಬುಜವು ಬಿರಿಯಲು, ಕಪಿವರನ ಕಳಕಳ ಧ್ವನಿಯು ಕೇಳಲು, ದೇವದತ್ತ ಯುದ್ಧದ ಭಯಂಕರ ಸಪ್ಪಳವಾಗುತ್ತಿತ್ತು, ಇದಲ್ಲದೇ ಗಾಂಡೀವ ಧನಸ್ಸಿನ ಬೊಬ್ಬೆಯೂ ಕೇಳಿಸುತ್ತಿದೆ. ಮನುಷ್ಯನಿಗೆ ನಿಷ್ಠುರವಾದ ಸಿಂಹಧ್ವನಿ, ತುರಗದಳ್ಳುರಿಯು ಸಾರುತ್ತಿದೆ. ಕಾಳಗಕ್ಕೆ ಅರ್ಜುನನು ಧುಮುಕಿ ಗರ್ಜನೆ ಮಾಡಿದನೆಂದನು ಭೀಷ್ಮನು.

೩) ಒಂದು ಭೀಷ್ಮರಿಗೆ ಕೈಮುಗಿದು ಈ ರೀತಿಯಾಗಿ ನುಡಿದನು. ಅವನು ಒಂದು ವೇಳೆ ಅರ್ಜುನನಾದರೆ ಅವನು ಹಿಂದಿನಂತೆ ಕಷ್ಟಪಡ ಬಹುದು. ಹದಿಮೂರು ವರ್ಷಗಳು ಇನ್ನೂ ಮುಗಿದಿಲ್ಲ. ನನ್ನ ಲೆಕ್ಕದ ಪ್ರಕಾರ ಇನ್ನೂ ಅಜ್ಞಾತವಾಸಕ್ಕೆ ದಿವಸವಿದಿಯೆಂದು ಕೌರವರಾಯನು ನುಡಿಯಲಾಗಿ ಭೀಷ್ಮಾಚಾರ್ಯರು ನಗುತ ಈ ರೀತಿಯಾಗಿ ನುಡಿದರು.

೪) ಮಗನೇ ಕೇಳು, ಐದುವರ್ಷಕ್ಕೆ ಹೆಚ್ಚಾಗಿ ಎರಡೇ ತಿಂಗಳನ್ನು ಅವರು ಅನುಭವಿಸಿದರು, ಹದಿಮೂರುವರ್ಷದ ವನವಾಸವು ಮುಗಿದುದು ಆ ಬ್ರಾಹ್ಮಣರಿಗೆ ತಿಳಿದಿದೆ ಆದರೆ ನಿನ್ನಿನ ಹಗಲು ನಿನ್ನದು. ಪಾಂಡವರು ಪ್ರವೇಶಿಸುವ ಇಂದಿನ ದಿವಸ ಅವರದು ಕಂದ ಕೇಳೆಂದನು.

೫) ಸಮುದ್ರವು ತನ್ನ ಎಲ್ಲೆಯನ್ನು ಮೀರಿ ಹಾಯಲಿ; ಭೂಮಿ ಇಳಿಯಲಿ; ದಿಗ್ಮಂಡಲ ಕಲ್ಮಿಷವಾಗಲಿ; ಕುಲಾದ್ರಿಗಳು ನಡೆದಾಡಲಿ; ಏನೇ ಆದರೂ ಸತ್ಯ ಭಾಷೆಗೆ ಕಲಿಯುದಿಷ್ಠಿರ ನೃಪತಿಯು ಅನ್ವಯಿಸುತ್ತಾನೆ. ಉಳಿದವರಿಗೆ ಅದು ಯೋಗ್ಯವಾಗುವದಿಲ್ಲ ತಂದೆ ಕೌರವರಾಯ ನೀನೆಂದ.

೬) ಯುದ್ಧವು ಸಾಕೆಂದರೂ ಅದು ಮುಂದುವರೆಯುತ್ತಲ್ಲದೆ ಅದು ತಿಳಿಯುವದಿಲ್ಲ. ಅರ್ಜುನನ್ನು ಕೊಲ್ಲಲೇಬೇಕು, ಬೇಡವೆನ್ನುವವರನ್ನು ನಾನು ನೋಡಿಲ್ಲ. ಹಲವುಮಾತೇಕೆ? ಆ ಕುಮಾರನನ್ನು ಕರೆಯಿಸಿ ಶೂರರ ಮುಂದೆ ಸಂಧಿಯನ್ನು ಮುಂದೆ ಒಡ್ಡಿ ಈ ಲೋಕದಲ್ಲಿ ಅದು ನಿನಗೆ ಸರಿಯಲ್ಲವೆನ್ನಲು ಮಹೇಶ ಕೇಳೆಂದನು.

೭) ದಳವಿರೋಧಿಗಳಿಗೆ ಮತ್ತು ನಮಗೆ ಯುದ್ಧವಾಗುವದಲ್ಲದೇ, ಪಾಂಡುಸುತರೊಡನೆ ಉಟ್ಟುಲಿದು ಬದುಕುವ ಭಂಡರುನಾವಲ್ಲ. ವೈರವನ್ನು ತೆಗೆದುಕೊಂಡೇ ಹೋಗುವವರು ಎಂದು ಕೌರವರಾಯನು ನುಡಿದನು.

೮) ಮೇಲಿ ಮಾಡಿದ ಕಾರ್ಯಕ್ಕೆ ನೀನೆ ಬಲೆಯೆನುತ ವಿಶಾಲ ಮತಿಯು ನಿಟ್ಟುಸಿರುಬಿಟ್ಟು, ಕೌರವನು ಕೆಟ್ಟನು, ಅಯ್ಯೋ ಎನ್ನುತ್ತ, ಯುದ್ಧವನ್ನು ನಾವು ಪಶುಜಾಲಸಹಿತ ನಾವಾಡುವೆವು, ನೀ ಕಿರಿಯ ಆಳಿನೊಡನೊಡನೆ ನಡೆಯೆಂದು ಸೇನೆಯನ್ನು ಎರಡು ಇಬ್ಭಾಗ ಮಾಡಿದನು.

೯) ಕೌರವೇಂದ್ರನ ಜೊತೆಗೆ ಸೇನೆಯನ್ನು ತಿಳಿ ಹೇಳಿ ಕಳುಹಿಸಿ ನಾರುಬಟ್ಟೆಯನ್ನು ಧರಿಸಿ ಭೀಷ್ಮಾಚಾರ್ಯನು ಸೈನ್ಯವನ್ನು ಕೂಡಿಕೊಂಡು ವೀರಕರ್ಣ, ಗೌತಮ, ಅಶ್ವತ್ಥಾಮ, ಶಕುನಿ ಮುಂತಾದ ಮಹಾರಥಾದಿಗಳನ್ನು ನರನಕಾಳಗದ ಸಲುವಾಗಿ ಕೂಡಿಕೊಂಡನು.

೧೦) ಇತ್ತ ಸುಯೋಧನನು ಗೋಕುಲಸಹಿತ, ಜನರು ಹೌದೆನ್ನುವಂತೆ ಹಾಯ್ದನು. ಅರ್ಜುನನು ಒಳ್ಳೆಯ ಕೆಲಸವನ್ನು ಮಾಡುತ್ತಿರುವನಲ್ಲ! ಎಂದುಕೊಂಡು, ಉತ್ತರಕುಮಾರ, ರಥವನ್ನು ಅತ್ತ ನಡೆಯಿಸಿ ಕೌರವನನ್ನು ತಡೆ ಎಂದು ಪಾರ್ಥನು ಹೇಳಿದನು.

೧೧) ಅದರಂತೆಯೇ ಉತ್ತರಕುಮಾರನು ಕುದುರೆಗಳನ್ನು ಚಪ್ಪರಿಸಿ, ಮುಂನಿನ ಯುದ್ಧಮಾಡುವವರನ್ನು ಗಮನಿಸದೇ ಬೆನ್ನುಹತ್ತಿದನು. ಅಯ್ಯಾ ಕೌರವ, ಕುರುವಂಶದಾವಾನಲನಂತಿರುವ ಅರ್ಜುನನು ಬರುತ್ತಿದ್ದಾನೆ. ದನಗಳನ್ನು ಬಿಡುಬಿಡು ಎಂದನು ಉತ್ತರನು.

೧೨) ಎಲೆಲೆ ನರನು ಜಾರಿದನು ಪಾರ್ಥನು ಬೆನ್ನುಹತ್ತಿದನೆಂದು ದ್ರೋಣ ಮತ್ತು ಗೌತಮರು ಹಿಳುಕಕೆನ್ನಗೆ ಸೇದಿ ಬೊಬ್ಬೆಯ ಕಳವಳದಿಂದ ಪಾರ್ಥನ ನಡುಗಟ್ಟಿ ನಿಲ್ಲೆಲವೋ ಅರ್ಜುನನೇ, ಕಾದಿ ನಿಟ್ಟೋಯಿಸಿ ಹೋಗು ಎಂದರು.

೧೩) ಅರ್ಜುನನು ನಗುತ್ತ ಅವರ ಪಾದಗಳಿಗೆ ಎರಡು ಬಾಣಗಳನ್ನು ಕಾಣಿಕೆಯಾಗಿ ಸಮರ್ಪಿಸಿ ಮುಂದುವರೆದನು. ಆತನ ಬಾಣ ಸರಂಪರೆಯಿಂದ ಘಾಸಿಗೊಂಡ ಕೌರವನ ಸೇನೆಯಲ್ಲವೂ ನಿಮಿಷದಲ್ಲಿ ಚಲ್ಲಾಪಿಲ್ಲಿಯಾಗಿ ಹೋಯಿತು.

೧೪) ನರನು ಕೋಲಾಹಲವನ್ನು ಮಾಡಿದನೆನಲು, ಬಾಣಗಳು ಶಕ್ತಿಗೊಂಡು ಹಬ್ಬಿದವು. ಪರಾಕ್ರಮಶಾಲಿಯ ಸಮೂಹವು ವಿಸ್ತಾರಗೊಂಡಿತು. ಕುಂಗಳ ರಾಶಿಯನ್ನು ಹುಲ್ಲಿನರಾಶಿಯಂತೆ ತೀವ್ರವಾಗಿ ಕೆಡುಹಲು ಮತ್ತು ಗರ್ವಮೊರೆಯಿಂದ ಅರ್ಭಟಿಯನ್ನು ಮಾಡಲಾಗಿ ಕಬ್ಬಕ್ಕಿಯು ಗಗನವನ್ನು ಮುಸುಕುವಂತೆ ಅರ್ಜುನನಬಾಣಗಳು ಮುಸುಕಿದವು.

೧೫) ಹಿಡಿದು ಖಂಡವನ್ನು ಕಚ್ಚಿ ಬ್ರಾಹ್ಮಣನು ಗಿಡಗನಂತಾಗಲು ಬಾಣಗಳು ವೀರರ ಗಂಟಲನ್ನು ಕಡಿದು ಬಿದ್ದವು. ಮತ್ತು ಅವುಗಳು ತಲೆಯಲ್ಲಿ ಗಾಢವಾಗಿ ಪ್ರವೇಶಿಸಿದವು. ಹಣೆಯಿಂದ ಪಿಶಾಚಿಯುದ್ಧವಿಸಿ ಸೈನ್ಯದ ಮತ್ತು ಆನೆಗಳ ನಡೆಗೆ ಉಡುಹಿದವು. ಗರುಸಹಿತ ಕುದುರೆಂಪ ಹೊಟ್ಟೆಯೊಳಗೆ ಹಾಯ್ದವು.

೧೬) ಆಗ ಕೆಲವರು ಬಿಲ್ಲನ್ನು ಬಿಸುಟರು. ಇನ್ನೂ ಕೆಲಕೆಲವರು ಬಾಣವನ್ನು ಹೊಡೆಯುವದನ್ನೇ ಬಿಟ್ಟರು. ಪಾರ್ಥನ ಬಾಣದ ತುದಿಯನ್ನು ಕಂಡು ಮೆಲ್ಲಮೆಲ್ಲನೆ ಸಾಗುವ ಶೂರ ಕೌರವನನ್ನು ಎದುರಿಗೆ ಕಂಡು 'ದನವನ್ನು ಕಳವುಮಾಡಿದವರೇ ಹೊಗದಿರಿ' ಎಂದನು ಶೂರ ಅರ್ಜುನನು.

೧೭) ಸೈನ್ಯವು ಕಾಯುತ್ತಿದೆ. ಕರ್ಣ ಮುಂತಾದ ಶಸ್ತ್ರಧಾರಿಗಳನ್ನು ಕರೆಯೆಂದು, ಕುರುರಾಯ ಎಲ್ಲಿ ಸಿಕ್ಕನು ಎಂದು ದ್ರೋಣ, ಕೃಪರು ಮತ್ತು ಭೀಷ್ಮರು ಬಾಯಿಬಿಡಲು ಕುರು ಸೇನೆಯಪರಾದ ಗುರು ಗಾಂಗೇಯ, ಶಕುನಿ, ವಿಕರ್ಣ, ಕೃಪ, ರಾಧೇಯ, ಸೈಂಧವ ಮತ್ತು ಚಿತ್ರಸೇನಾದಿಗಳು ಕೂಡಿದರು.

೧೮) ಇತ್ತಕಡೆಗೆ ಕುರುರಾಯನ ಸೈನಿಕರು ದನಗಳನ್ನು ಬಿಟ್ಟುಕೊಟ್ಟು ಓಡಿಹೋದರು. ಸಂಗರ ವಿಜಯ ಗರ್ವಿತರ ಮುಸುಡುಗಳು ಹೊತ್ತಿ ಕಮರಿದವು. ಸುತ್ತುಗೋವರರ ಸಂಕೇತದಲ್ಲಿ ಮತ್ತು ಪಶುಸಮೂಹದಲ್ಲಿ ಉತ್ತರನು ಸಂತೋಷಗೊಂಡು ಆ ಪ್ರವಾಹದಲ್ಲಿ ಮುಳುಗಿದನು.

೧೯) ಬಿಗಿದ ಹಾಲು ಸುರಿಯುವ ಕೆಚ್ಚಲು, ಇರುವ ಆ ದನಗಳ ಬಾಲ ಮತ್ತು ಮುಖವನ್ನು ಗೋಪಾಲಕರು ಸ್ಪರ್ಶಿಸುತ್ತಿದ್ದರು. ಮತ್ತು ಆ ಹಿಂಡು ದನಗಳನ್ನು ಅಪ್ಪಿಕೊಳ್ಳಹತ್ತಿದರು.

೨೦) ತಿರುಗಿ ಕೆಂಧೂಳಿಯಿಡುತ ದನಗಳು ಪುರಕ್ಕೆ ಹೋದವು. ನಲಿವು ಮಿಗಿಲು ಉತ್ತರ ಕಿರೀಟಿಯರು ಮತ್ತೆ ಕಾಳವನಾಂತುಕೊಂಡರು. 'ಅರಸುಮೋಹರ ಮುರಿದು ಹರಿಬರ ಮರಳಿಸುವ ಮಿಡುಕುಳ್ಳ ವೀರರಸು ಧುರಕೆ ಬರಹೇಳು.' ಎನುತ ಪಾರ್ಥನು ಬಾಣವ ತೂಗಿದನು.

೨೧) ದನಗಳು ಮರಳಿ ಬಂದವು. ಮೂರಿಗೆ ಔತಣವನ್ನು ಮರುಳಿ ಹೇಳಿತು. ಹಸಿದ ಹೆಬ್ಬುಲಿಯು ಅರ್ಭಟಿಸಿ ಕ್ಷುಲ್ಲಕ ಮೃಗವನ್ನು ಅನುಸರಿಸುವಂತೆ ಕೌರವನನ್ನು ಹಿಂದಿಕ್ಕಿ ಸೌಬಲ, ದುಶ್ಯಾಸನ ಜಯ ಪ್ರಥರನ್ನು ಪರಿಬಲಕಾಲ ಭೈರವನಾದ ಪಾರ್ಥನು ಉರುಬಿದನು ತರುಬಿದನು.

೨೨) ಇಕೊ ದನಗಳು ಮರುಳಿದವು ಎಂಬ ಗರ್ವದಿಂದ ಶಿಖರಕ್ಕೆ ಮುಟ್ಟ, ಇಂದ್ರನ ವಜ್ರಾಯುಧವನ್ನು ಸೇನೆಯ ಮೇಲೆ ಪ್ರಯೋಗಿಸಿ, ಸಮುದ್ರಕ್ಕೆ ಕಡಲ್ಗಿಚ್ಚು ಇಡೆಯೆಂದು ಅರಸನಳುಕಿದನೆಂಬ ಜಯದ ಉಬ್ಬರದಲ್ಲಿ, ಕಡುನಿಧಾನದ ಬಿರುಬಿಸಲನ್ನು ಕೊಳ್ಳೆಂದು ಕೈಕೊಂಡರು ಅತಿರಥರು.

೨೩) ಭಂಡರು ಮಾತನಾಡಿದರೆ ಗೌರವವನ್ನು ಮಾರಿಕೊಂಡು ಮಾತನಾಡುತ್ತಾರೆಯೇ? ಇವರನ್ನು ಸಾಕಿದೆ ಏತಕ್ಕೆ? ಒಂದು ನಿಮಿಷ ಕಾದಿದರೆ ಸಾಕು ಇವರ ಸಮೂಹವನ್ನು ಕತ್ತರಿಸಿ ಹಾಕುತ್ತೇನೆ. ಆದ್ದರಿಂದ ನಾನು ನಿಮ್ಮ ನುಡಿಯನ್ನು ಕಂಡು ಬಲ್ಲೆ ಎನ್ನುತ್ತ ಅರ್ಜುನನು ಅತಿರಥರ ಮೇಲೆ ಬಾಣ ಪ್ರಯೋಗ ಮಾಡಿದನು.

೨೪) ಆತನ ಬಾಣಾಘಾತದಿಂದ ಕೃಪನ ಶಿರಸ್ತ್ರಾಣಸೀಳಿತು; ಭೀಷ್ಮರ ಕವಚ ಹರಿದು ಹೋಯಿತು; ದ್ರೋಣನ ಮೈಯು ನೋವಾಯಿತು; ಕರ್ಣನಿಗೆ ಮೈಯೆಲ್ಲಾ ಗಾಯವಾಯತು; ಅಶ್ವತ್ಥಾಮನು ಮೈಮರೆತನು; ಸೈಂಧವ, ಶಕುನಿ ದುಶ್ಯಾಸನಾದಿಗಳ ಅವಯುವಗಳು ರಕ್ತದಲ್ಲಿ ತೊಯ್ದು ಹೋದವು.

೨೫) ಅಕ್ಷೋಹಿಣಿ ಸೈನ್ಯವು ಸೋತು ಓಡಿ ಹೋಗದೆ ನೊಂದವು. ಹಲವರ ಒಡಲುಗಳು ಮೇಲಾಸೆಯ ಆದಿಕ್ಯದಿಂದ ಹೆಚ್ಚಾಗಿ ಸಟೆದು

ಸೊಪ್ಪಾದ ಅಖಿಳರಾಯ ಸಮೂಹವನ್ನು ಭೀಷ್ಮ ದ್ರೋಣರ ಆಜ್ಞೆಯಲ್ಲಿ ಸೈನ್ಯವನ್ನು ಸಮಾಧಾನಪಡಿಸಿ ಹಿಂದುರುಗಿಸಿತು.

೨೬) ಇತ್ತಕಡೆಗೆ ಪಾರ್ಥನೇ ನಿಲ್ಲು ನಿಲ್ಲು. ಮತ್ತ್ಯಸ್ಯನನ್ನು ಬ್ರಾಹ್ಮಣರನ್ನು ಅಂಜಿಸಿದರೆ ಮುಗಿದುಹೋಯಿತೇ? ನೀನು ನಿನ್ನ ಸೈನಿಕರನ್ನು ಕರೆದುಕೊಂಡು ಬಂದು ನಿನ್ನ ಶೌರ್ಯವನ್ನು ಮೆರೆಯೆಂದು ಕರ್ಣನು ನುಡಿಯುತ್ತ ಯುದ್ಧರಂಗಕ್ಕೆ ಬಂದನು.

೨೭) ನಿನ್ನನ್ನು ಯುದ್ಧದಲ್ಲಿ ಗೆಲ್ಲಲು ಎಂಟೆದೆಯೇ ಉಂಟು. ಕೌರವನ ಆಸ್ಥಾನದಲ್ಲಿ ನಿನ್ನನ್ನು ಹೋಲು ಶೂರರುಂಟೆ? ನೀನು ಸಿಟ್ಟಿಗೆದ್ದು ಇದಿರಾಗು ನಿನ್ನ ದೇಹದಲ್ಲಿಯ ಬೆಂದ ಮಾಂಸವನ್ನು ಅಖಿಳಭೂತಗಳಿಗೆ ಕೊಟ್ಟ ಅರ್ಜುನನೆನಿಸಿ ಮೆರೆಯುವ ಕರ್ಣನೇ ಕೇಳೆಂದ.

೨೮) ಹೆದರಿದ ಚಾಸರು ಸಿಟ್ಟಿನ ಮೋರೆಯನ್ನು ಮಾಡಿಕೊಂಡು, ರಾಕ್ಷಸನ ರೋಷವನ್ನು ತಾಳಿ, ಸಿಟ್ಟಿನ ಕಿಡಿಯನ್ನು ಹೊರಚೆಲ್ಲುತ್ತ ಮಹಾನಾಯಕರು ನಿಷ್ಠುರ ಸಿಂಹ ಗರ್ಜನೆಯನ್ನು ಕೇಳಿ ಗಾಬರಿಗೊಂಡು ಹೊಕ್ಕು ಹೆಣಗಾಡಿದರು.

೨೯) ಬೇಟೆಗಾರರನ್ನು ಅಳಿದವನಲ್ಲ ಮೊದಲನೆಯವ, ವಿರೋಧಿ ದಳಕ್ಕೆ ಶೂರನಾದ, ಸ್ವಾಮಿ ಕಾರ್ಯಕ್ಕೆ ತಲೆಯನ್ನು ತೆರುವವರು ನಾವು. ಕ್ಷುಲ್ಲಕಕ್ಕೆ ಅಂಜುವವರು ನಾವಲ್ಲ. ವೈರಿಸು ಬಳಿಕ ಎನ್ನುತ್ತ ಶೂರನಾದ ಅರ್ಜುನನು ಬಾಣದ ಸುರಿಮಳೆಯನ್ನು ಸುರಿದನು.

೩೦) (ಆದರೂ ಮೋಡವನ್ನು ಸೀಳಿ ಹೊರಕ್ಕೆ ಬರುವ ಸೂರ್ಯನಂತೆ ಆತನು ಅವರ ಬಾಣಗಳನ್ನೆಲ್ಲಾ ನಿವಾರಿಸಿಕೊಂಡು ಶರಪಂಜರವನ್ನು ಹೂಡಲಾಗಿ ಅವು ಅರ್ಜುನನ್ನು ಮುತ್ತಿದವು. ವಿರಾಟರಾಯನ ಪುತ್ರನು ನಡುಗಿದನು, ಕುದುರೆಗಳು ಅಡಿಗಡಿಗೆ ನೊಂದವು, ಆತನ ಬಾಣಗಳಿಂದ ಭೂಮ್ಯಾಕಾಶಗಳು ತುಂಬಿ ಹೋಗಿ, ನಿಮಿಷದಲ್ಲಿ ಮಹಾದ್ಭುತವಾಯಿತು.)

೩೧) ವೈರಿಗಳ ಬಾಣಗಳನ್ನು ಅರ್ಜುನನು ನಿಮಿಷದಲಿ ಹರಿಸಿದನು. ಮತ್ತು ಒಂದು ನಿಮಿಷದಲಿ ಎರಡು ಬಾಣಗಳಿಂದ ಕರ್ಣನ ಕೈಯಲ್ಲಿರುವ ಬಿಲ್ಲನ್ನು ಮುರಿಯಲಾಗಿ ಕರ್ಣನು ಮೌನದಲ್ಲಿ ಸರಿದನು.

೩೨) ಇದೇನು ಓಟವೇ ? ಅಪಜಯದ ಅಪವಿತ್ರ ಸ್ತ್ರೀಯ ಓಟವೇ ? ಬೇಡಿಕೊಳ್ಳಿರಿ ಒಳ ಜಗಳವು ಇರುವದೇ ? ಈಗ ನಾಲಿಗೆ ಯೇನಾಯ್ತು ? ಅಟಪಿಕನಾದ ಭೂಪತಿಯ ಕೀರ್ತಿಯ ಕೂಟಣೀ ಒಗ್ಗಾಯ್ತು. ಕೆಗೆ ಪುರುಳಾ ನಪುಗೇಳು ಎನ್ನುತ್ತ ಪಾರ್ಥನನ್ನ ದ್ರೋಣನು ತಾಗಿದನು.

೩೩) ಪಾರ್ಥನೇ, ಇದಿರುಗೊಳ್ಳು. ಶೂರನಿಗೆ ಅಟಪತನವೆಲ್ಲಿಯದು. ಕರ್ಣನನ್ನು ಪದೆಬಡೆದ ಸಾಹಸಕ್ಕೆ ನೀನು ಹಿಗ್ಗದಿರು. ನಮ್ಮ ಕೈಗುಣವ ಈ ಯುದ್ಧದಲ್ಲಿ ನೋಡು. ಆಯ್ಯೊ ಕೈಸಾರಿದವು. ನಿನ್ನ ಶ್ರೇಷ್ಠವಾದ ಬಾಣ ಗಳ ರುಚಿಯನ್ನು ತೋರಿಸು ಎಂದನು.

೩೪) ಇದಿರುಗೊಂಡೆ, ವಂದಿಸಿದೆ, ನನ್ನ ಉದಯದ ಶ್ರೇಯಸ್ಸು ನಿಮ್ಮದು. ನಿಮ್ಮ ಆಶೀರ್ವಾದದಿಂದ ನನಗೆ ಈ ವಿದ್ಯೆಯು ಲಭಿಸಿತು. ಈ ಕಾಮಾರಿ ಪುರವೈರಿಯ ಹೃದಯವು ನಿಮ್ಮದು. ಈಗ ನಿಮ್ಮದಿರೊಳೆ ನಾನು ಯುದ್ಧ ಮಾಡಲಾರೆ. ತಾವು ಕರುಣಾಸ್ಪದರು ಎಂದನು ಅರ್ಜುನನು.

೩೫) ಈ ಯುದ್ಧದ ಸಂದರ್ಭದಲ್ಲಿ ವಿನಯವು ಉಚಿತವಾದದ್ದೇ. ಈಗ ಯುದ್ಧ ಮಾಡುವದು ಜನಪರ ಕರ್ತವ್ಯವಾಗಿದೆ. ಸಾಕುಳಿದ ಮಾತೇಕೆ ? ಮಗನೇ ಸೈರಿಸು ಎನ್ನುತ್ತ ನಿಮಿಷದಲ್ಲಿ ಬಾಣದ ಮಳೆಯನ್ನು ದ್ರೋಣನು ಸುರಿಸಿದನು.

೩೬) ಪ್ರತಿಬಿಂಬದಲಿ ಭಾವಿಸಲು ಬೇರೆ ಯಾವದು ಅತಿಶಯವುಂಟು ನೀವು ನನಗೆ ಯಾವ ರೀತಿಯಲ್ಲಿ ಕಲಿಸಿದಿರಿ ಅದನ್ನು ನಿಮಗೆ ಈಗ ಒಪ್ಪಿಸುತ್ತೇನೆ, ನೀವು ನೋಡಿ ಎನ್ನುತ್ತ ಪಾರ್ಥನು ಬಾಣ ಬಿಡಲಾಗಿ ಅದು ಭೂ ಮತ್ತು ಆಕಾಶವನ್ನು ಹಬ್ಬಿತು.

೩೭) ಆ ಪಾರ್ಥನ ಬಾಣದ ಗತಿಯು ಆಕಾಶವೆಂಬ ಡೋಣಿಗೆ ಸಮುದ್ರವು ಕುಸಿಯುವಂತಾಯ್ತು. ಪಾರ್ಥನೆಂಬ ಶ್ರೇಷ್ಠ ಬ್ರಹ್ಮನ ಬಾಣ ಸೃಷ್ಟಿಯನ್ನು ಯಾರು ಅರಿತುಕೊಳ್ಳುವವರು! ಇಳೆಯ ಮರ್ತ್ಯರು. ಶಿವಶಿವಾ, ಅರ್ಜುನನಿಗೆ ಸರಿಯೆಂಬವರ ಬಾಯಲ್ಲಿ ಹುಳ ಬೀಳಲಿ, ಮತ್ತೆ ಗುಣಕ್ಕೇಕೆ ಮತ್ಸರವೆಂದರು ದೇವತೆಗಳು.

೩೮) ಅರ್ಜುನನ ಬಾಣಕ್ಕೆ ದ್ರೋಣಾಚಾರ್ಯರು ಮೂರ್ಛೆ ಹೋಗಲಾಗಿ ಆಗ ಸಾರಥಿಯು ಮೆಲ್ಲಮೆಲ್ಲನೆ ಕರ್ಣನನ್ನು ನಿರೀಕ್ಷಿಸುತ್ತ ದ್ರೋಣಾಚಾರ್ಯರ ಹತ್ತಿರ ತೊಲಗಲು 'ಎಲೆಲೆ ಶಸ್ತ್ರಾಚಾರ್ಯರನ್ನು ಅರ್ಜುನನು ಗೆಲಿದನು, ಇನ್ನೇನು ಕೌರವ ಬಲಕ್ಕೆ ವೈರತ್ವ ಹೆಚ್ಚಾಯಿತು, ರಾಜ್ಯಾಭ್ಯುದಯವಾಯ್ತೆಂದನು.

೩೯) ಸಕಲ ಕೌರವರಾಯ ದಳವು ಬಾಯಿಬಿಟ್ಟಿತು. ಭಟರು ತಮ ತಮಗೆ ಒಳ್ಳೆಯದಾಯ್ತೆಂದು ಹಾಯ್ದರು. ಕೌರವರ ಸೈನ್ಯವನ್ನು ಕಾಯಬೇಕೆಂದು ಗಾಂಗೇಯನು ಕೈಯಲ್ಲಿ ಬಿಲ್ಲನ್ನು ಹಿಡಿದು ಬಾಣವನ್ನು ಜೋಡಿಸುತ್ತಿರಲಾಗಿ ಅರ್ಜುನನು ಉತ್ಸಾಹದಿಂದ ಅದನ್ನು ತಡೆದನು.

೪೦) ಶಹಭಾಸ್, ಕಲಿಪಾರ್ಥನೇ, ಲೋಕದಲ್ಲಿ ನೀನು ಖ್ಯಾತಿಯನ್ನು ಪಡೆದಿ. ಇದಲ್ಲದೇ ನೀನು ಬ್ರಾಹ್ಮಣನಾದ ದ್ರೋಣನನ್ನೂ, ಅವನ ಪುತ್ರನನ್ನೂ ಮತ್ತು ಕೃಪಾಚಾರ್ಯನನ್ನು ಗೆದ್ದೆ, ಇನ್ನು ನಿಮ್ಮ ಭೂತಳವನ್ನು ಬಯಸುವರೆ ಎನ್ನುತ್ತ ಭೀಷ್ಮನು ಬಾಣ ಪ್ರಯೋಗವನ್ನು ಮಾಡಿದನು.

೪೧) ನಿಮ್ಮ ಕರುಣಾಮಯವಾದ ಅವಲೋಕನವೇ ನಮ್ಮ ಸಂಪತ್ತು, ಇದನ್ನು ಬಿಟ್ಟು ನನಗೆ ಬೇರೆಯಿಲ್ಲ. ಇದಿಲ್ಲದೇ ಧರ್ಮ ಕಾಳಗದಲ್ಲಿಯ ವಿಕ್ರಮದ ವಿವರಣೆ ಫಲಿಸುವದೇ ನಿಮ್ಮಂಥಹ ಗರ್ವಷ್ಠರಿಗೆ ಬೇರೆ ರಾಜ್ಯದ ಹೆಮ್ಮೆ. ಅದು ತನಗೇಕೆ ಎನ್ನುತ್ತ ಪಾರ್ಥನು ಬಾಣವನ್ನು ಹೊಡೆದನು.

೪೨) ಪಾರ್ಥನ ಬಾಣವನ್ನು ಎರಡು ಬಾಣಗಳಿಂದ ಕೀಲಿಸುತ್ತ, ಐದು ಬಾಣಗಳಿಂದ ಹನುಮನ ಹಣೆಯು ಒಡೆಯುವಂತೆ ಬಾಣವನ್ನು ಬಿಟ್ಟನು. ಚೂಪಾದ ಎಂಟು ಬಾಣಗಳಿಂದ ಕವಚವನ್ನು ಕೊಚ್ಚಿದನು; ನರನ ವೃಕ್ಷದ ಬಿಸುಗೆ ಬಿಚ್ಚಲು ಮೂರು ಬಾಣವನ್ನು ಬಿಡಲು ಬೊಬ್ಬಿರಿದನು.

೪೩) ಮತ್ತೇ ಗಂಗಾಸೂನು ಪಾರ್ಥನನ್ನು ತನ್ನ ಐದು ಅಂಬಿನಿಂದ ರಥವನ್ನು ಕಿತ್ತಿ ಮರಳುವಂತೆ ಮಾಡಿ, ಮತ್ತೇ ಮೂರು ಮೂರು ವಜ್ರಾಸ್ತ್ರ

ಗಳನ್ನು ಬಿಟ್ಟನು. ಹುತ್ತ ಸುರಗನು ಬಿಗಿದು ಹೋಗುವಂತೆ ತಪ್ಪಿಸಿಕೊಳ್ಳ ಹತ್ತಿದವು ಆಗ ಫಲ್ಗುಣನು ಹತ್ತು ಬಾಣಗಳನ್ನು ಪ್ರಯೋಗಿಸಿದನು.

೪೪) ಅವನ ಬಾಣದಿಂದ ಭೀಷ್ಮನ ಎದೆ ಬಲಹೀನವಾಗಲು ಅವ ಮಾನಿಸಲು ತಿಳಿಯದೇ ಮಲಗಿ ನಿಂದನು. ಅರೆರೆ ಭೀಷ್ಮ ಸೋತನು; ಕುರುಸೇನೆ ಉಳಿವುದೋ ! ಕುರುಸೇನೆ ಸಿಲುಕಿತು ಸೊರೆಯೇ, ಎನ್ನಲಾಗಿ ಕುರುರಾಯ ಹೊರ ಹೊರಟನು.

೪೫) ಬಾಲರನ್ನು, ವೃದ್ಧರನ್ನು ಬ್ರಾಹ್ಮಣರನ್ನು ನೀನು ಕಾಳಗ ದಲ್ಲಿ ಓಡಿಸಿದೆ. ಪಾರ್ಥನೇ ನೀನು ಮರುಳಾದೆ. ಆಳಿದಡವಿಯು ರಾಜ್ಯ ವಲ್ಲದೇ ಮತ್ತೇನು. ಮೇಲೆ ಮತ್ತೆ ಭೂಮಿಯನ್ನು ಬಯಸಿದೊಡೆ ನಿಮಗೆ ಆಳಲು ಬರುವದೇ. ಹೋಗು ಅರಣ್ಯಕ್ಕೆ ಎನ್ನುತ್ತ ಬಾಣವನ್ನು ಪ್ರಯೋಗಿ ಸಿದನು.

೪೬) ಸತ್ಯವನ್ನು ಉದ್ಧಟ ರೀತಿಯಿಂದ ಆಚರಿಸಿದರೆಲ್ಲವೋ, ಆದರೆ ನಿನ್ನನ್ನು ಲೋಕವು ದೂರಬೇಕೆಂದು ನಾವು ಅಡವಿಯನ್ನು ಪ್ರವೇ ಶಿಸಿದೆವು. ಇದು ಪಾಪವು. ನನ್ನ ಅವಧಿ ಹಾರಿಹೋಯಿತು. ಹೆಚ್ಚು ಹರ ಟುವ ನಿನ್ನ ಗಂಟಲ ಸೂರು ರಾಜ್ಯವನ್ನು ಕೊಳುವೆ ಸೈರಿಸು ಎನ್ನುತ್ತ ನರನು ಬಾಣವನ್ನು ಹೊಡೆದನು.

೪೭) ಎಲೆ ಮರುಳೆ, ಗರುಡನ ಸಮಾಧಾನದಲ್ಲಿ ಹಾವು ಕನ್ನವನ್ನು ಕೊರೆದು ಬದುಕುವದೇ ? ವೃಥಾ ಆಸೆ ಏಕೆ ? ಮತ್ತು ನೀನು ಪೊಳ್ಳು ಮಾತನ್ನಾಡುತ್ತಿ, ಎನ್ನುತ್ತ ಕೌರವನು ಬಾಣವನ್ನು ಪ್ರಯೋಗಿಸಿದನು.

೪೮) ಎಲೆ ಗರುಡನೇ ನಿನ್ನ ಪಕ್ಷವನ್ನು ಒರಿಸಿ, ನಿನ್ನ ಹೆಡತಲೆಗೆ ಅಡರಿ ನಿನ್ನ ಬೆನ್ನಲಬನ್ನು ಮುರಿಯುತ್ತೇನೆ. ತಿರುಗಿಸುವ ಮುರರಿಪುವನ್ನು ನೀನು ತಿಳಿದಿಲ್ಲ. ಅವಮಾನಿಸು ಕಲಿಯೊದೆಂದ್ದಬ್ಬರಿಸಿ ಕೌರವನ ಎದೆ ಯನ್ನು ಅಗುಳಿದ ಎರಡು ಬಾಣಗಳೊಂದಿಗೆ ಕಾಣಿಸಿಕೊಂಡನು.

೪೯) ಅವನ ದೊಡ್ಡದಾದ ಭೂಮಿ, ಸೀರೆ, ಅವಯವಗಳು ರಕ್ತದಲ್ಲಿ ತೊಯ್ದವು. ಶಕ್ತಿಯನ್ನು ಕಳೆದುಕೊಂಡ ಸಾರಥಿಗೆ ಸೂಚಿಸಿ ರಥವನ್ನು ಮರುಳಿಸಿದನು. ಅರ್ಜುನ, ನೋಡದಿರು ಅಯ್ಯೋ ಕೌರವರ ಪಲಾಯನ ಪಾರ್ಥಿವರ ಪಂಥವು ಮರುಳಿ ಕೊಲ್ಲುವದಿಲ್ಲೆಂದನು.

೪೦) ಈ ಗರ್ವತನದ ಕುರುಳು ಕೆಟ್ಟಿದೆ ಎನ್ನಲಾಗಿ ಅರಸನು ಬಹಳವಾಗಿ ನಾಚಿದನು. ಆವನು ಮತ್ತೆ ಧೈರ್ಯ ತೆಗೆದುಕೊಂಡು, ಉತ್ಸಾಹಿತನಾಗಿ ಕಾಳಗಕ್ಕೆ ನಿಂತನು. ದೊರೆಯಲ್ಲಿರುವ ಗುಣುಡವನ್ನು ಕಂಡು ಸೈನಿಕರು ತಮ್ಮ ತಮ್ಮಲ್ಲಿ ಉತ್ಸಾಹ ತಂದುಕೊಂಡರು ಧೃಢ ಮನಸ್ಸಿನವರು ನಿಶ್ಚೈಸಿ ಸೈನ್ಯವೆಲ್ಲವೂ ರಾಶಿಯಾಯಿತು.

೪೧) ಅಂಗಪಿಸಿತ ಅರಿಸೇನೆ ಲೋಕವ ನುಂಗಿ ಕುಣಿಯಲು ಘರ್ಗನ ರಂಗಭೂಮಿಯ ತೊಳೆಯುವ ನಮುದ್ರ ಅಂಡದಲಿ, ಭೀಷ್ಮ, ಕೃಪ, ದುಶ್ಶಾಸನಾದಿಗಳು ಪಾರ್ಥನ ಭಂಗಿಸುತಿರಲು ಸರ್ವಾಂಗ ಒಲವು ಮೂದು ಫಲಿಗೆಯಲ್ಲಿ ಜೋಡಿಸಲು ಇನ್ನು ನಮ್ಮಳಿವಂಗೆ ಹದನೇನೆನುತ ಮತ್ಸ್ಯದ ಸೂನು (ಉತ್ತರನು) ಚಿಂತಿಸಿದನು.

೪೨) ನೆರೆದ ಕತ್ತಲೆಯ ಸಮೂಹವನ್ನು ಸೂರ್ಯನು ತೆರಳಿಸುವ ನಂತೆ, ಮೇಘಗಳ ಸಮೂಹವನ್ನು ಗಾಳಿಯ ಸೈನ್ಯ ಮುರಿದು ಅದನ ಸೆರಗು ಹಿಡಿಯುವಂತೆ, ಕುರುಬಲವು ಒರಲಿ ಮೊಬ್ಬರಿಸಿ ಒರುತ್ತಿರಲು ಪಾರ್ಥನು ಸಮ್ಮೋಹನಾಸ್ತ್ರವನ್ನು ಹೂಡಿದನು.

೪೩) ಆ ಪಾರ್ಥನಿಂದ ಹೊಡೆಯಲ್ಪಟ್ಟ ಸಮ್ಮೋಹನ ಅಸ್ತ್ರವು ಶಕ್ತಿಯುತವಾಗಿ ಪ್ರಸರಿಸಲಾಗಿ ಬಹಳ ಜನ ನಿದ್ರಾ ವ್ಯಸನದಿಂದ ಭಯ ಗೊಂಡು ನಾಡಿ ಮತ್ತು ಉಸಿರು ಸಂಚಯ ನಿಂತು ನಿದ್ರಾಕುಳರಾದರು. ಕುರುಸೇನೆ ಮೈಮರೆತು ಒರಗಿತು.

೪೪) ಸರಳವಾಗಿ ಸೊಕ್ಕನ್ನು ಅಡಗಿಸಲು ಕೃಪಾಚಾರ್ಯನು ಮೈಮರೆಯಲು, ಇತ್ತ ದ್ರೋಣನು ಪರಮ ನಿದ್ರಾಸಕ್ತನಾದನು. ಅಶ್ವತ್ಥಾಮ, ಕರ್ಣರು ಅತ್ತ ಮೈಮರೆತರು. ಇತ್ತ ರಥದ ಕಡೆಗೆ ದುರುಳ ನಾದ ದುರ್ಯೋಧನನೊಡನೆ ಸೇನೆ ಮೈಮರೆಯಿತು.

೪೫) ವಿಜಯಾರ್ಥಿಯಾದ ಪಾರ್ಥನು ರಥದಿಂದಿಳಿದು ಶತ್ರುಸೇನೆ ಯನ್ನು ಪ್ರವೇಶಿಸಿ, ಅಲ್ಲಿ ಮಲಗಿದ್ದ ದ್ರೋಣನ ಚರಣ ಕಮಲಗಳಿಗೆ ನೊಸಲ ಚಾಚಿದನು. ಭೀಷ್ಮಂಗೆ ಮೆಯಿಕ್ಕಿದನು. ರಥದೊವಗೆ ಸುಳಿದು ಕರ್ಣನ ಮುಕುಟ ಪಟ್ಟವ ಸೆಳೆಮ 'ದುರ್ಯೋಧನನ ವಸ್ತ್ರವ, ಸುಲಲಿತ ಆಭರಣ ತೆಗೆ' ಎಂದು ಉತ್ತರನಿಗೆ ಹೇಳಿದನು.

೫೭) ಧರಣಿ ಪಾಲನ ಮುಕುಟವನು ಕತ್ತರಿಸಿ, ದುಶ್ಯಾಸನನ ಘನಮಣಿ ಸರದ ಬಗೆಗೆ ಹೇಳಿ ಭೂರಿ ಶ್ರವ (ಸೋಮದತ್ತನ ಮಗ, ಇವನು ಭಾರತ ಯುದ್ಧದಲ್ಲಿ ಕಾದಿದನು) ಜಯದ್ರಥರನ್ನು ಹೊರಳಿಸಿದನು. ವಿಶೋಕ ಕುವರರ ಹುರುಳುಗೆಡಿಸಿ, ಅಖಿಳ ರಾಜಗಿಗೆ ಶಿರಕೆ ಭಂಗವ ಹೊರಸಿ ಫಲಗುಣನು ರಥವನ್ನು ಏರಿದನು.

೫೮) ಅರ್ಜುನನ ನಿಯಮದ ಪ್ರಕಾರ ಉತ್ತರನು ರಥದಿಂದ ಇಳಿದು ರಾಜನ ಕೋಮಲ ವಸ್ತ್ರಾಭರಣವನ್ನು, ಕರ್ಣ, ಕೃಪಾಚಾರ್ಯ ಮತ್ತು ಅಶ್ವತ್ಥಾಮನ ಸುಲಲಿತಾಂಬರ ರತ್ನಭೂಷಣಗಳನ್ನು ಕೊಂಡು ರಥವನ್ನು ಏರಿದನು. ಆಗ ಗಾಂಗೇಯನು ಬಿಲ್ಲನ್ನು ತೆಗೆದುಕೊಂಡು ಅರ್ಜುನನನ್ನು ನುಗ್ಗಿ ಬಂದನು.

೫೯) ಎರಡು ಬಾಣದಲ್ಲಿ ಬಿಲ್ಲನ್ನು ಕತ್ತರಿಸಿ ಭೀಷ್ಮನ ಗರ್ವವನ್ನು ನಿಲ್ಲಿಸಿ, ಧರಣಿಪತಿಪಾಲನ ಮುಕುಟವನ್ನು ಮೂರು ಬಾಣಗಳಿಂದ ಕಡಿದು ಹಾಕಿದನು. ಆಗ ಕಲಿ ಪಾರ್ಥನು ನಗುತ್ತ ಉತ್ತರನು ಸಹಿತ ಬನ್ನಿಯ ಗಿಡದಲ್ಲಿ ಆಯುಧವನ್ನು ಇಟ್ಟು ರಥವನ್ನು ಜೋಡಿಸಿ ನಗರಕ್ಕೆ ಬಂದರು.

## ೭. ಪರಮಯುತಿ ಕಾಯಿದನು ಕೈಯಲಿ ತುಂಬಿ ರಕುತವನು.

೧) ಬಳಿಕ ಅರ್ಜುನನು ಇತ್ತಕಡೆಗೆ ಮರದೊಳಗೆ ಆಯುಧಗಳನ್ನು ಇಟ್ಟು ಮುನ್ನಿನ ಸಾರಥಿತನವನು ಅಳವಡಿಸಲು ಕಪಿಕುಲಲಲಾಮನು ಇಳಿದು ಪಾರ್ಥನನ್ನು ಬೀಳುಕೊಂಡನು. ಪಟ್ಟಣದಲ್ಲಿ ಉತ್ಸಾಹದಿಂದ ನಿಂದು ಅರ್ಜುನನು ಉತ್ತರನಿಗೆ ಹೇಳಿದನು.

೨) ನೀನೆ ಧುರವ ಜಯಿಸಿದೆನೆಂದು ದೂತರಿಗೆ ಅರುಹು. ನಿನ್ನ ವಿಕ್ರಮವ ಪಸರಿಸು, ಅರಸನು, ನಿನ್ನನ್ನೇ ಮನ್ನಿಸಲಿ ಪುರಪರಜನಂಗಳು ನಿನ್ನ ವಿಜಯದ ಹರುಷದಲ್ಲಿ ಹೆಚ್ಚಿರಲಿ. ನಾನು ನೇಮಿಸಿದಂತೆ ಮಾಡು ಎಂದನು.

೩) ಈ ರೀತಿಯಾಗಿ ಅರ್ಜುನನು ಹೇಳಲು 'ಸರಿ' ಅದನ್ನು ನೀನೇ ಬಲ್ಲೆಯೆಂದೆನ್ನುತ್ತ ದೂತರನ್ನು ಕರೆದು ಮತ್ಸ್ಯನ ಮಗನು ಕೌರವ ನನ್ನು ಜಯಿಸಿದಯೆಂದು ಜನಪನಲ್ಲಿಗೆ ಹೋಗಿ ಹೇಳು ಎಂದು ನೇಮಿಸುತ್ತಿರ ಲಾಗಿ, ಇತ್ತ ಕಡೆಗೆ ಜನಪ ಮತ್ತು ಕುಂತೀ ಸುತರು ಅರಮನೆಗೆ ಬಂದರು.

೪) ಅರಮನೆಯನ್ನು ಪ್ರವೇಶಿಸಿದ ರಾಜನು ಉತ್ತರನನ್ನು ಕಾಣ ದೆಯೇ 'ಕಂದ ಎಲ್ಲಿ' ಎಂದು ರಾಜ ಕೇಳಲು ಮತ್ಸ್ಯ ರಾಜನು ಬೃಹನ್ನ ಳೆಯ ಸಾರಥಿತನದಲಿ ಕೌರವರೊಡನೆ ಕಾಳಗಕ್ಕೆ ನಡೆದನು ಎಂದರು.

೫) ಆ ಮಾತನ್ನು ಕೇಳಿದಾಗ ಅವನು ಒಡಲೊಳಗೆ ಕೊರಗಿ ಕಳ-ವಳಿಸಿದನು. ಆಗ ಅವನ ಮನಸ್ಸು ನೊಂದು "ಅಯ್ಯೋ ಕುಮಾರನೆತ್ತ ರಾಯರ ದಳವೆತ್ತ, ! ಬಂದವರು ಭೀಷ್ಮಾದಿಗಳು ! ತಾನೇನು ಇಂದು. ಧರನೇ ? ಎಂಥ ಮರುಳನು ಇವನು ಎಂದು ಚಿಂತಿಸಿದನು.

೬) ರಾಜನು ಮಗನಿಗೆ ಪಡಿಬಲವಾಗಿ ಬಲಶಾಲಿಯಾದ ಮಂತ್ರಿ ಗಳನ್ನು ಬೀಳುಕೊಟ್ಟನು. ಹೀಗೆ ದುಗಡದಿಂದಿರಲು ಹೊಳಲಕೈಸೂರೆ ಗಳ ಕಳ ಕಳ ಮೊಗದ ಹರ್ಷದಲಿ ಅಖಿಳ ದೂತಾದಿಗಳು ಬಂದುದು. "ಗುಡಿಯ ಕಟ್ಟಿಸು, ನಗರಿಯಲಿ, ಕುಮಾರನನ್ನು ಇದಿರುಗೊಳಿಸು"

೭) ರಾಯಕುವರ, ಪಿತಾಮಹನು, ರಿಪುರಾಯ ಕುವರ ಮುರಾರಿ ಕೌರವರ ಸೈನ್ಯವನ್ನು ಧಿಕ್ಕರಿಸಿದ ಅರಿರಾಜಗಜ ಪಂಚಮುಖನೇ ಜೀಯಾ ಬಿನ್ನಹ. ಕರ್ಣ, ಗುರು, ಗಾಂಗೇಯ ಮೊದಲಾದ ಅಖಿಳ ರಾಯರ ದಳವನ್ನು ಗೆದ್ದು ಉತ್ತರನು ತುರುವನ್ನು (ದನಗಳನ್ನು) ಮರುಳಿಸಿದನು' ಎಂದು ಜನ ಜಯಜಯಕಾರ ಮಾಡುತ್ತಿದ್ದರು.

೮) ಈ ಜಯಜಯಕಾರವನ್ನು ಕೇಳಿ ಮತ್ಸ್ಯರಾಜನು ಹಿಗ್ಗಿ ದನು, ತನುಪುಳಕಾದಿ ತಳಿತುದು. ಬಹಳ ಹರ್ಷದ ದಾರಿಯಲ್ಲಿ ಮನ ಮುಂದುಗೆಟ್ಟುದು. ಕಣ್ಣುಗಳು ಅರಳಿದವು. ಒಸಗೆಯನ್ನು ತಂದಿಟ್ಟ ದೂತರಿಗೆ ಉಡುಗೆ ತೊಡುಗೆಗಳನ್ನು ಹಂಚಿದನು.

೯) ಹರ್ಷದಲ್ಲಿ ಉತ್ಸಾಹಿಸಿದ ವಿರಾಟನು ಕಂಕಭಟ್ಟನ ಕರೆದು 'ಕವಿದು ನೂಕುವ ಹರುಷವನು ಸಂತವಿಸಲೋಸುಗ ಅವನಿಗೆ ಜೂಜಾಡ

ಬೇಕೆನಿಸಿತು. ಸಮೀಪದಲ್ಲಿ ಇದ್ದ ಕಂಕ ಭಟ್ಟನು ಅವನಿಪತಿ ಕ್ರೀಡಾ ಜೂಜಿನಲಿ ಪಾಂಡವರು ಸಿಲುಕಿ ಲೋಕದಲ್ಲಿ ಈ ಪರಿಯನ್ನು ಅನುಭವಿಸ ಬೇಕಾಯಿತೆಂದನು ವಿರಾಟರಾಜನಿಗೆ.

೧೦) ಅವರು ರಾಜ್ಯವನ್ನು ಒಡ್ಡಿ ಸೋತರು, ಆದರೆ ಈಗ ಪಣವು ಬೇರೆ ಇಲ್ಲ. ಕುಮಾರನ ವಿಜಯದ ಸುಖವನ್ನು ಮೊಗಿಸಲು ನಮಗೆ ಮನ-ಸ್ಸಾಗಿದೆ, ಅದಕ್ಕಾಗಿ ಪಗಡೆಕಾಯಿಯ ಸಮೂಹವನ್ನು ತೆಗೆ ಎಂದು ಅವನಿಪತಿ ನಸುನಗುತ ರಾಜನು ಜೂಜಾಡುವ ಪಟವನ್ನು ಹಾಕಿದನು.

೧೧) ಆಟವನ್ನು ಆಡುತ್ತ ಮತ್ಸ್ಯನೃಪನು 'ಕಂಕನೇ ನೋಡು ಕಾಳಗದಲ್ಲಿ ನಮ್ಮ ಉತ್ತರನು ಗೆದ್ದನು. ಪರಶಿವನಿಗೂ ಅಸಾಧ್ಯರಾದ ಕೌರವರನ್ನು ನನ್ನ ಮಗನು ಗೆದ್ದುಬಿಟ್ಟಿದ್ದಾನೆ. ದೇವ ಮಾನವರಲ್ಲಿ ನನ್ನ ಮಗನಿಗೆ ಸಮಾನರೇ ಇಲ್ಲವೆಂದು ಹೇಳಬಹುದು.' ಎಂದು ಉಬ್ಬಿ ನುಡಿದನು.

೧೨) ಅರಿಸೇನೆ ಸೋತುದುಂಟು ಅದರಿಂದ ದನಗಳ ಸಮೂಹವು ಮರುಳಿತು. ಇದು ನಿಜವಾಗಿಯೂ ಗೆಲವು, ಆದರೆ ಇದರಲ್ಲಿ ಆಶ್ಚರ್ಯದ ಅದ್ಭುತ ಯಾವ ರೀತಿಯದು ? ಆದರೆ ವಿಶ್ವ ವಿಖ್ಯಾತ ಸಾರಥಿಯಿರಲು ಕುಮಾರನಿಗೆ ಭಯ ಎಲ್ಲಿಯದು ? ತಪ್ಪೇನು ? ಎಂದನು ಕಂಕನು.

೧೩) ಈ ಮಾತನ್ನು ಕೇಳಿ ವಿರಾಟರಾಜನು ರೇಗಿ, ಎಲೆ ಮರಳೆ, ಸನ್ಯಾಸಿ, ಮತ್ಸರದೊಳಗೆ ಮುಳುಗಿದ ಚಿತ್ತ ನಿನ್ನದು. ನನ್ನ ಮಗನ ಗೆಲುವಿನಲ್ಲಿ ಸಂದೇಹವೇ. ಹೇಳು ಯಾವುದು ಅದು ಅದ್ಭುತವು. ನನ್ನ ಮಗ ಶುದ್ಧ ಹೇಡಿಯೆಂದು ಭಾವಿಸಿದೆಯೇನೋ ! ಸಾರಥಿ ಬಲುಹನುಳ್ಳ ವನೇ, ನಪುಂಸಕನಲಿ ನಿರಂತರ ಪಕ್ಷವೋ ? ಎಂದು ಖತಿಗೊಂಡನು.

೧೪) ಆದರೂ ಧರ್ಮರಾಯನು ಪ್ರಶಾಂತನಾಗಿ "ನಿನ್ನ ಮಗ ನಿನ್ನ ಕಣ್ಣುಗಳಿಗೆ ಮಹಾ ಸತ್ವನಂತೆ ತೋರಿಬರುವದರಲ್ಲಿ ಆಶ್ಚರ್ಯವೇನೂ ಇಲ್ಲ. ಸಾಂಸಾರಿಕ ಭ್ರಮೆಯೇ ಅಂತಹದು. ಆದರೂ ನಾನು ಹೇಳುತ್ತೇನೆ ತಿಳಿದುಕೋ. ಗೆದ್ದವನು ಬೃಹನ್ನಳೆ. ಭೀಷ್ಮದ್ರೋಣಾದಿಗಳು ಉತ್ತರ ಕುಮಾರನಿಗೆ ಸೋಲುವಂತಹ ಹೇಡಿಗಳಲ್ಲ" ಎಂದನು.

೧೫) ಧರ್ಮರಾಯನು ಈ ಮಾತುಗಳನ್ನು ಆಡುತ್ತಿದ್ದಂತೆಯೇ ಸಿಟ್ಟಿಗೆದ್ದು, ಹಲ್ಲು ಕಡಿಯುತ್ತ, ಕಂಗಳಲಿ ಉರಿಯನ್ನು ಉಗುಳುತ್ತ ಹೊನ್ನದಾಳವನ್ನು ತೆಗೆದುಕೊಂಡು ವಿರಾಟನು ಆತನ ಹಣೆಗೆ ಹೊಡೆದನು. ಆಗ ತಲೆಯಲ್ಲಿ ರಕ್ತವು ಹೊರಹೊಮ್ಮ ಹತ್ತಿತು.

೧೬) ಧರ್ಮರಾಯನು ಸೈರಿಸುತ್ತ ರಕ್ತದ ಧಾರೆಯನ್ನು ಕೆಳಕ್ಕೆ ಬೀಳದಂತೆ ಹಿಡಿದು, ಅತಿ ಧೀರವಾದ ಓರೆಯ ನೋಟದಲ್ಲಿ ದ್ರೌಪದಿಯನ್ನು ನೋಡಿದನು. ಆಕೆ ಭಯದಿಂದ ನಡುಗುತ್ತ ಓಡಿಬಂದು ಸುರಿಯುತ್ತಿದ್ದ ರಕ್ತವನ್ನು ತನ್ನ ಸೀರೆಯಿಂದ ಒರೆಸಿದಳು.

೧೭) ದ್ರೌಪದಿಯು ಕೈಯಿಂದ ಹಣೆಯನ್ನು ಮತ್ತು ಕಪೋಲವನ್ನು ತೊಡೆದು ತೊಳೆದಳು. ಆಗ ಇದನ್ನು ಕಂಡು ಬೆರಗಾಗಿ 'ಈತನ ರಕ್ತವನೇಕೆ ಹಿಡಿದೆ' ಈತನ ಹಣೆಯಲ್ಲಿ ರಕ್ತ ಸುರಿದರೆ ನೀನೇಕೆ ಅದನ್ನು ಒರಸಬೇಕು ? ಎಂದನು ವಿರಾಟರಾಯನು.

೧೮) ನಿನ್ನ ರಾಜ್ಯದ ಸಿರಿಯು ಉರಿದು ಹೋಹುದು. ಅದನ್ನು ಪರಮಯತಿ ಕೈಯಲ್ಲಿ ರಕ್ತವನ್ನು ತುಂಬಿ ಕಾಯ್ದನು. 'ಅಯ್ಯೋ! ಈತನ ರಕ್ತದ ಒಂದು ತೊಟ್ಟು ನೆಲಕ್ಕೆ ಬಿದ್ದರೆ ಈ ರಾಜ್ಯವನ್ನೇ ಒರೆಸಿ ಹಾಕುವನು, ಇದು ಆತನ ಪ್ರತಿಜ್ಞೆ'ಯೆಂದಳು.

೧೯) ಇದು ವಿರಾಟನಿಗೆ ಇನ್ನಷ್ಟು ಗೂಢವಾಯಿತು. 'ಈಕೆ ಯಾರು ? ಇವರಾರು ? ನಾಟ್ಯವ್ಯಾಕರಣ ಪಂಡಿತ ಬೃಹನ್ನಳೆ ಯಾರು ? ಇದರ ಬಗ್ಗೆ ನನಗೇಕೆ ಚಿಂತೆ'ಯೆಂದನು. ಇತ್ತ ಪಟ್ಟಣದಲ್ಲಿ ನೂಕು ನುಗ್ಗಾಯಿತು ಉತ್ತರನ ನೆರವಿನಿಂದ ನೋಡೋಣವೆಂದನು.

೨೦) ಮಂತ್ರಿಗಳು ಇದಿರು ಬಂದರು; ಸುಂದರ ಸ್ತ್ರೀಯರು ಅಕ್ಷತೆಗಳನ್ನು ಸೂಸಿದರು; ಉದಿತವಾದ ಮಂಗಳ ವಾದ್ಯಗಳು ಭೋರ್ಗರೆಯುತ್ತಿದ್ದವು. ಪರಕೋಟಿದರು ಜಯದ ಅಭ್ಯುದಯ ತಾನೆಂದನುತ ಗುಜು ಗುಜಿಸಿ ತಮ್ಮೊಳಗಾಡುತಿರ್ದರು.

೨೧) ಉತ್ತರನ ವಿನೋದ ಹೆಚ್ಚಾಗಿ ಜೀಯನೆನುತ್ತ ನಿವಾಳಿಗಳನ್ನು ನೂಕಿದನು. ಹೊಗಳುವ ಭಟ್ಟರು ಕೋಪಿಸುತ್ತ, ಅತ್ಯಂತ

ಉತ್ಸವದಿಂದ ರಾಜನ ಮಗನನ್ನು ಅರಮನೆಗೆ ಕರೆತರಲು ರಾಜನು ಮಗನನ್ನು ಸಂತೋಷದಿಂದ ಆಲಿಂಗಿಸಿದನು.

೨೨) ಬಾ ಮಗನೆ, ವಂಶ ಚಿಂತಾಮಣಿಯೇ, ಕೌರವ ಕುಲಕ್ಕೆ ಧೂಮಕೇತುವೇ, ಬಂದೆಯಾ ಕಂದನೆನುತ್ತ ಅಪ್ಪಿಕೊಳ್ಳುತ್ತ ಅರಮನೆ ಯೊಳಗೆ ಕರೆದೊಯ್ದು ಕುಳ್ಳಿರಿಸುತ್ತ, ಹೆಂಗಸರು ಆತನಿಗೆ ಉಪ್ಪಾರತಿ ಯನ್ನು ಎತ್ತಿ, ವಸ್ತ್ರಾಭರಣವನ್ನು ನಿವಾಳಿಸಿ ತೆಗೆದು ಹಾಕಿದರು.

೨೩) ಇದನ್ನೆಲ್ಲಾ ಉತ್ತರ ಕುಮಾರನು ಕಂಡು, 'ಅಪ್ಪಾ ಈ ಬಯಲಾಡಂಬರವೆಲ್ಲಾ ನನಗೆ ಬೇಡ.' ಈ ವಿರೋಪಚಾರವು ನನಗೆ ಒಪ್ಪುವದಿಲ್ಲ. ಇದು ನನಗೆ ಬೇಡ ಅರಸ, ಎಂದನು ನಸುನಗುತ. ದರ್ಪ ವುಳ್ಳವರಿಗೆ ಈ ಬಗೆಯ ಮರ್ಯಾದೆ ಒಪ್ಪುವದಿಲ್ಲವೇ ಎಂದನು ಮತ್ಸ್ಯನು.

೨೪) ವೀರತನ ನಮಗೆ ಉಂಟೆ? ಬೆಂದುದನು ಹುಡುಕಿ ತೆಗೆಯ ಬೇಡವೇ? ತಂಡೆಯೇ ಕಾಳಗವ ಕಾದಿ ಗೆಲಿದವನು ಬೇರೆ. ಈ ಕಾಳಗ ವನ್ನು ನಿ ವಾಗಿಯೂ ಗೆಲಿದವನು ಯಾರು? ಎಂಬುದನ್ನು ನಿಮಗೆ ತೋರಿಸುವೆನು. ಅದಕ್ಕಾಗಿ ಬಿಳ್ಕೊಡಿಯೆಂದು ಅರಮನೆಗೆ ಹಿಂಪುರುಗಿ ದನು.

೨೫) ಇತ್ತ ಕಡೆ ಅರ್ಜುನದೇವನು ಉತ್ತರೆಯ ಭವನಕ್ಕೆ ಬಂದು ತಾನು ತಂದಂತಹ ವಿವಿಧ ರತ್ನಾಭರಣಗಳನ್ನು ಕನ್ನೆಗೆಕೊಟ್ಟು ಉತ್ತರನ ಮನೆಯಿಂದ ಭೀಮಾಗ್ರಜರ ಕಡೆಗೆ ಬಂದನು.

೨೬) ಬಳಿಕ ಸಂಕೇತದಲ್ಲಿ ಭೂಪನ ಮನೆಯನ್ನು ಭೀಮನು ಪ್ರವೇಶಿಸಿದನು. ನಂತರ ನಕುಲಸಹದೇವರು ಬಂದು ಪಾರ್ಥನಿಗೆ ನಮಸ್ಕರಿಸಲು ಬಂದಾಗ ನೋಡದರೆಲ್ಲರೂ ಹರ್ಷದಿಂದ ಅಪ್ಪಿಕೊಂಡರು.

೨೭) ಉಳಿದನಾಲ್ವರು ಪಾರ್ಥನು ಕೌರವನನ್ನು ಗೆದ್ದರೀತಿಯನ್ನು, ಕೌರವರ ಬಲಕ್ಕೆ ಬಂದ ಭಂಗವನ್ನು ಹೇಳುತಿರಲು ಆಗ ಧರ್ಮರಾಯನ ಹಣೆಯ ಮೇಲಿನ ಗಾಯವನ್ನು ಕಂಡು ಇದೇನು? ಎಂದು ಕೇಳಲು ಆಗ ಪಾರ್ಥನು 'ಇದು ರಕ್ತದ ಬಿಂದು ಇಳಿಯುತ್ತಿದೆಯೆಂದು' ಹೇಳಿದನು.

೨೮) ಅನವಧಾನವಾಯ್ತು, ಸಾಕದನೆನೆಯತೇತಕೆ ಮಾಡಿದ ನೆನಲು ಅರ್ಜುನನು ಕೋಪಗೊಳ್ಳುತ್ತ, ದ್ರೌಪದಿಯ ಶಪಥ ಮಾಡಿ ಮನಸ್ಸಿನಲ್ಲಿ ಉರಿದೆದ್ದನು. 'ವಿರಾಟನ ತನುವ ಹೊಳ್ಳಿಸಿ ರಕ್ತವನ್ನು ಶಾಕಿನಿ ಯರಿಗೆ ಹೊಯ್ಯುಸುವೆನು ಹೊಲ್ಲೇಹ ಹೇಳೆಂದನು.'

೨೯) ಕೀಚಕನ ಬಳಗವಿದ್ದಲ್ಲಿಗೆ ವಿರಾಟನನ್ನು ಕಳುಹಿಸಬೇಕೇ? ಹಣೆಯೊಡೆದ ಆ ದುರಾತ್ಮನನ್ನು ಮತ್ತು ಆ ಕುಲವನ್ನು ರಕ್ತದಲ್ಲಿ ಒರೆಸುವೆನು. ಇವನನ್ನು ಸೀಳಿ ಭೂತಗಣಗಳಿಗೆ ಬಲಿಕೊಡುವನೆಂದು ಎದ್ದನು ಭೀಮನು.

೩೦) ಆಗ ಧರ್ಮಜನು ನಡುವೆ ಬಂದು 'ಕಾಕಬಳಿಸಲು ಬೇಡ ಸಾಕು ಸಾಕು, ನನ್ನ ರಕ್ತ ಧರೆಗೆ ಬಿದ್ದಿಲ್ಲ.' ಈ ಕಮಲ ಲೋಚನೆಯ ಸೆರೆಗೇ ಶಾಖವಾಯಿತು. ರಕ್ತದಲ್ಲಿ ದುಃಖಬೇಟವೆಂದು ಭೂಪನು ಭೀಮ ನನ್ನು ಹಿಡಿದನು.

೩೧) ಕೇವಲ ಧರ್ಮದ ಜಾಡ್ಯವನ್ನು ಹಿಡಿದು ಮೈಮರೆದು ಅರಣ್ಯದಲ್ಲಿ ಹದಿಮೂರುವರ್ಷ ತೊಳಲಿದುದು ಸಾಕಾಗಲಿಲ್ಲವೇ? ರಾಜ ತೇಜಸ್ಸನ್ನು ಮೆರೆಯುವ ದಿನಕ್ಕಾಗಿ ನಮ್ಮನ್ನು ನೀವು ಹಿಡಿಯಬೇಡಿರಿ ಎಂದನು ಭೀಮಸೇನನು.

೩೨) ಉದಯದಲ್ಲಿ ನಾವಿಬ್ಬರೂ ಆತನ ಮನೆಗೆ ಹೋಗಿ ಗರ್ವ ಡೊಳು ರಾಜನ ಪೀಠವನ್ನು ನಿಮ್ಮಲ್ಲಿಯ ಸಿಟ್ಟನ್ನು ಹಿಡುದು ತುಳಿಯುವೆವು. ಮತ್ತು ಆ ಮದ ಮುಖನನ್ನು ಸಂಹರಿಸುವೆವು. ಹರ್ಷದಿಂದ ಅವನು ಇದಿರುಗೊಂಡರೆ ಮನ್ನಿಸುವೆ ಎನ್ನಲಾಗಿ ಇದು ಸಮ್ಮತವೆಂದು ಸಹಭವ ನನ್ನು ಸಂತೈಸಿದನು.

## ೮. ರಂಜಿಸಿದುದಭಿಮನ್ಯುವಿನ ವೈವಾಹ.

೧) ಜನಮೇಜಯ ಧರತ್ರಿಪಾಲನೇ ಕೇಳು, ಪಾಂಡವರು ಅಜ್ಞಾತ ವಾಸವನ್ನು ಹರುಷದಿಂದ ಮುಗಿಸಿ ಇರುಳನ್ನು ನೂರೆ ಬೀಳುಕೊಟ್ಟರು.

ಅಭ್ಯುದಯವನು ಕೈವಶೀಕರಿಸುವಂತೆ ಮರುದಿನ ಉದಯದಲಿ ಮೂಡಣ ಶೈಲಮುಖದಲಿ ಭಾನುಮಂಡಲದ ಕೆಂಪು ಸುಳಿಯಿತು.

೨) ಏಳುಕುದುರೆಯ ಖುರಪುಟದ ಕೆಂಧೂಳವು ಕುಂತಿಕುಮಾರಕರ ಏಳಿಗೆಯ ತನಿರಾಗರಸ ಉಬ್ಬರಿಸಿ ಪಸರಿಸಿತೋ, ಪೂರ್ವ ದಿಗ್ಬಾಲಿಕೆಯ, ಬೈತಲೆಯ ಕುಂಕುಮ ಜಾಲವೋ? ಹೇಳೆನಲು ದಿನಪನ ಜೂಣಿ ರಂಜಿಸಿತು.

೩) ರವಿ ಮೂಡಣಾದ್ರಿಯಲ್ಲಿ ಓಲಗವನಿತ್ತು ಸರಸಿಜದ ಪರಿಮಳಕ್ಕೆ ತುಂಬಿಯ ಒರವ ಕೊಟ್ಟನು. ಚಂದ್ರಕಾಂತಕೆ ಬೆರಗನಿತ್ತನು. ಚಕ್ರವಕ್ಕಿಯ ಸೆರೆಯ ಬಿಡಿಸಿದನು. ಕೆರಳಿನೈದಲೆ ಸಿರಿಯ ಸೂರೆಯ ತರಿಸಿದನು ರಿಪುರಾಯನ ರಾಜ್ಯವನ್ನು ಒರಿಸಿದನು.

೪) ಹರಹರ ಶ್ರೀಕಾಂತ ಎನ್ನುತ್ತ ಐವರು ಕುಮಾರರಿಗೆ ಮಾಂಗಲ್ಯ ಮಜ್ಜನವ ಮಾಡಿಸಿ ಕನಕಾದಿ ವಸ್ತುಗಳನ್ನು ಸುರರಿಗೆ ಇತ್ತರು.

೫) ತಮದ ಗಂಟಲನೊಡೆದ ಹರುಷದ್ಯುಮಣಿ ಮಂಡಲದಂತೆ ಜೀವಭ್ರಮೆಯ ಕವಚವ ಕಳೆದು ಹೊಳೆಹೊಳೆವ ಆತ್ಮಾನಂದದಲಿ ರಾಜೋತ್ತಮನಾದ ಯುಧಿಷ್ಠಿರದೇವನು ರಾಜತೇಜದಿಂದ ಕಂಗೊಳಿಸಿದನು.

೬) ಪರಮ ಸತ್ಯ ವ್ರತನಾದ, ಮಹಾಯಾಗವನ್ನು ಮಾಡುವಂತಹವನು, ಭೀಮಾದಿಗಳ ಸಹಿತವಾಗಿ ವಿರಾಟರಾಯನ ಮನೆಗೆ ಬಂದು ಧರ್ಮರಾಯನು ಮಣಿಖಚಿತವಾದ ಸಿಂಹಾಸನವನ್ನು ಅಡರಿದನು.

೭) ಅಜ್ಞಾತವಾಸದ ವೇಷವನ್ನು ಕಳೆದೊಗೆದು ಕ್ಷಾತ್ರತೇಜದಿಂದ ರಾಜೇಂದ್ರರಂತೆ ಕಂಗೊಳಿಸುವ ಇವರು ಅವನಿಪತಿಯ ಸಿಂಹಾಸನ ವೇರಿದ್ದನ್ನು ಕಂಡು ಕಂಚುಕಿಗಳು ಅರಮನೆಗೆ ಬಂದು ಭೂಪತಿಗೆ ಹೇಳಿದರು.

೮) ಆತನು ತನ್ನ ಮಂತ್ರಿ ಪುರೋಹಿತರನ್ನೂ ಉತ್ತರಕುಮಾರನನ್ನೂ ಅರಮನೆಯ ಓಲಗಶಾಲೆಗೆ ಕರೆತಂದು ಕೆಲಸಿದ ಚಂದ್ರಬಿಂಬದ ಕಿರಣಲಹರಿಗಳನ್ನು ಮತ್ತು ವಿಮಳಾಭರಣ ರತ್ನಪ್ರಭೆಯನ್ನು ರಾಜನು ದೂರದಿಂದ ನೋಡಿದನು.

೯) ಸೋದರ ಚತುಷ್ಟಯ ಮಧ್ಯದಲ್ಲಿ ಹರನ ನಾಲ್ಕು ಮುಖದ ಮಧ್ಯಸ್ಫೀತ ಈಶಾನನಂತೆ ಯುಧಿಷ್ಠಿರನು ಕಂಗೊಳಿಸಿದನು. ಎಡಬದಿಯಲ್ಲಿ ದ್ರೌಪದಿಯನ್ನು ಅವರ ವಿವಿಧ ಆಭರಣಗಳಿಂದ ಒಪ್ಪುವ ತೇಜವನ್ನು ನೋಡಿ ವಿರಾಟರಾಯನ ಮತ್ತು ಅವನ ಪರಿಜನದ ಕಣ್ಣುಗಳು ಕೋರೈಸಿದವು.

೧೦) ವಲಲ, ಕಂಕ, ಬೃಹಂದಳೆಯ ಮೈಸುಳಿಯನ್ನು ಹೋಲುವರು ಎಂದು ಕೆಲವರು ನುಡಿಯಲಾಗಿ, ಕೆಲವರು ಲೋಕಪಾಲಕರು ತಿಳಿಯುವದಿಲ್ಲವೆಂದು ತಮ್ಮತಮ್ಮೊಳಗೆ ಮಾತನಾಡುತ್ತಿರಲು ಉತ್ತರ ಕುಮಾರನು ಮುಂದೆ ಬಂದು ನಗುತ್ತ ಈ ರೀತಿಯಾಗಿ ನುಡಿದನು.

೧೧) ತಾತನೇ, ಒಂದು ಬಿನ್ನಹ, ನಿನ್ನ ವೈರಿಸಮೂಹವನ್ನು ಗೆದ್ದವನು ಈ ನಾನು ತೋರಿಸುವವನು. ಮುಂದೆ ಮೆರೆಯುವವನು ಕೀಚಕನನ್ನು ಸಂಹರಿಸಿದನು. ಈತ ನಕುಲನು, ಮತ್ತು ಕೆಲದಲ್ಲಿ ತೋರುವ ಆತ ಸಹದೇವನು, ಇವರೆಲ್ಲರಿಗೆ ಹಿರಿಯ ಈತ ಧರ್ಮನಂದನನೆಂದು ತೋರಿಸಿದನು.

೧೨) ಈ ಐವರ ರಮಣಿ ಇವರ ಕೆಲದಲ್ಲಿ ನಿಂತ ಕಮಲಮುಖಿ ಪಾಂಚಾಲಿ. ಇವರೇ ಆ ವಿಮಲ ಗುಣ ರಾಮಾಭಿರಾಮರು ಪಾಂಡುನಂದನರು. ನಮಗೆ ಭಾರಿಯ ಭಾಗ್ಯಲಕ್ಷ್ಮಿಯು ಮಮತೆ ಕೈಸಾರಿದುದು. ಆದ್ದರಿಂದ ಆ ನೃಪರ ಪಾದಗಳಿಗೆ ಬೀಳುವೆವು ನಡೆನಡೆ, ಧನ್ಯರಾದೆವೆಂದನು.

೧೩) ನಿಜವಾಗಿಯೂ ಈತನೇ ಧರ್ಮಜನು, ನಿಶ್ಚಯವಾಗಿ ಇವನೇ ವಾಯುಪುತ್ರನು, ಈತನೇ ಅರ್ಜುನನು, ಮಾದ್ರಿತನಯರೇ ಇವರು. ಈ ಹೆಂಗಸೇ ದ್ರೌಪದಿಯು ಆಶ್ಚರ್ಯವೇನಿಲ್ಲ. ಈ ಭುವನಜ ವಿಖ್ಯಾತರು ಎಲ್ಲಿಂದೆಲ್ಲಿ ಮೂಡಿದರು ಎನ್ನುತ್ತ ಬೆರಗಾದನು.

೧೪) ಅವರ ದರ್ಶನವಾದುದಕ್ಕೆ ಮಣಿರತ್ನ ಕನಕವನು ತರಿಸಿ ಕಾಣಿಕೆಯನಿರಿಸಿ ಮುದದಲಿ ಮುಳುಗಿ ನಿಜಪರಿಕರ ಸಹಿತ ಮೈಯಿಕ್ಕಿ "ವರನೃಪಾಲತ್ರಾಹಿ ಭುವನೇಶ್ವರ ಪರಿತ್ರಾಯಸ್ವ" ಎಂದು ಮತ್ಸ್ಯ ಭೂಪಾಲ ಪಾದಗಳನ್ನು ಹಿಡಿದನು.

೧೫) ಕರುಣಾಳುಗಳಾದ ನೀವು, ನಾವು ಮಾಡಿದ ಅಪರಾಧವನ್ನು ಮನ್ನಿಸಿ ಕಾಯಬೇಕೆನುತ್ತ ಭಕ್ತಿಭಾವದಲ್ಲಿ ಮತ್ಸ್ಯನೃಪತಿಯ ಮಂತ್ರಿ ಮಕ್ಕಳು ಮಹೇಶನ ಮತ್ತು ನೃಪತಿಯ ಎದುರಿನಲ್ಲಿ ಮೆರೆದರು.

೧೬) ಸುದೀಷ್ಣೆಯು ಕುಮಾರಿಯರೊಡನೆ ವಿಳಾಸಿನಿ ಜನ ಸಹಿತ ರಾಣೀವಾಸದಲ್ಲಿಗೆ ಬಂದು ಕಾಣಿಕೆಯನ್ನು ಕೊಟ್ಟು ನಮಸ್ಕರಿಸಿದಳು. ಸಕಲ ಪರಿವಾರ ಪುರಜನ ದೇಶಜನ ಕಾಣಿಕೆಯನಿತ್ತು ಮಹೇಶನಿಗೆ ಮೈಯಿಕ್ಕಿ ಬಹಳ ಹರುಷದಲಿ ಕಂಡರು.

೧೭) ತಲೆಯನ್ನು ಎತ್ತಿ ವಿರಾಟ ಭೂಪನು ಹತ್ತಿರ ಕರೆದು ಪೀಠದಲ್ಲಿ ಕುಳ್ಳಿರಿಸಿಕೊಂಡಾಗ ಸಂತೋಷವಾಗಿ ಈ ರೀತಿ ನುಡಿದನು. ಪರಮ ಪವಿತ್ರ ನಾದ ರಣಧೀಶ್ವರನ ದರ್ಶನವನ್ನು ಪಡೆದು ಭೂಮಿಯಲ್ಲಿ ನಾವು ಧನ್ಯ ರಾದೆವು ಎಂದನು ಮತ್ಸ್ಯನು.

೧೮) ಈ ದೇಶ ನಿಮ್ಮದು ಎಂದು ತಿಳಿಯಿರಿ. ಈ ನಗರ ಇದರ ಹೆಚ್ಚಿನ ಕೋಶ ನಿಮ್ಮದೆಂದು ತಿಳಿಯಿರಿ. ಈ ಸಮಂಜಸ ದಿವಸದಲಿ, ಸಿಂಹಾಸನವ ನೇರಿದ ಸಂದರ್ಭದಲ್ಲಿ ಅಭಿಷೇಕವನ್ನು ವಿಸ್ತರಿಸುವೆನು ಚಿತ್ತೈಸು ಎಂದನು.

೧೯) ಆದರೆ ಧರ್ಮರಾಜನು ಮುಗುಳ್ನಗೆಯನ್ನು ಸೂಸುತ್ತ 'ಅಯ್ಯಾ ನಿನ್ನ ಮಧುರ ನುಡಿಗಳ ಅಭಿಷೇಕದಿಂದಲೇ ನಾನು ಸಂತೃಪ್ತಿ ಯನ್ನು ಹೊಂದಿದ್ದೇನೆ. ಇನ್ನು ಆ ವಿಚಾರ ಸಾಕು. ನಮಗೂ ರಾಜ್ಯವಿದೆ ನಮ್ಮದೆಂಬ ಈ ನೆನಹೆ ನಮಗೆ ಉಪಚಾರವೆಂದನು ಭೂಪನು.

೨೦) ಇತ್ತ ಉತ್ತರನು ಧರ್ಮನಂದನನ ಪಾದಗಳಿಗೆ ಮುಕುಟವ ಚಾಚಿ 'ಒಂದು ನೇಮವ ಕೊಡಿ ನನ್ನ ತಂಗಿಯಾದ ಉತ್ತರೆಯನ್ನು ಅರ್ಜುನ ನಿಗೆ ಕೊಡಬೇಕೆಂದಿರುವೆನು.' ಹೀಗೆಂದು ನಸುನಗೆಯಿಂದ ಪಾರ್ಥನನ್ನು ನೋಡಲಾಗಿ, ಪಾರ್ಥನು ತನ್ನ ಮನಸ್ಸಿನ ನಿಶ್ಚಯವನ್ನು ಯುಧಿಷ್ಠಿರನಿಗೆ ಹೇಳಿದನು.

೨೧) 'ಒಂದು ವರ್ಷದ ವರೆಗೆ ಇವಳಿಗೆ ನಾಟ್ಯವಿದ್ಯೆಯನ್ನು ಚೆನ್ನಾಗಿ ಹೇಳಿಕೊಟ್ಟೆನು.' ಈ ತರುಣಿ ನನ್ನನ್ನು ತಂದೆಯಂತೆ ಭಾವಿಸಿದಳು. ಈ ಪ್ರಕಾರ ಶಿಷ್ಯನಿಷ್ಠೆಯಲ್ಲಿ ಗುರುತನ ತತ್ತರಿಸಿ, ಕೆಟ್ಟು, ಇವಳು ನನ್ನ

ರಾಣಿಯಾಗೆಂಬುದು ಅನುಚಿತವಾದುದು. ಆದ್ದರಿಂದ ಈ ವರ ಕುಮಾರಿಯನ್ನು ನಿಜ ಅಭಿಮನ್ಯುವಿನಗೆ ಕೊಡಿ ಯೆಂದನು.

೨೨) ಅರ್ಜುನನ ಈ ವಚನಕ್ಕೆ ವಿರಾಟರಾಜನು ನಿರ್ವೇನು ಆತನೇನು ಎನ್ನುತ್ತ ಮಹನಾನಂದದಲ್ಲಿ ಮನ್ನಿಸಿ ನಗುತ ವೀಳೆಯವನ್ನು ಕೊಟ್ಟನು. ಧರ್ಮನು ವಿರಾಟನನ್ನು ಮನ್ನಿಸಿ 'ನಮ್ಮೈವರ ಹಿತೈಷಿಯಾದ ಶ್ರೀಕೃಷ್ಣ ಪರಮಾತ್ಮನಿಗೆ ಒಪ್ಪಿತವಾದರೆ ನಮಗೂ ಒಪ್ಪಿತ'ವೆಂದನು.

೨೩) ಪೃಥ್ವಿಯ ಒಡೆತನವು ನಮಗೆ ಹೆಚ್ಚಾಗಿ ಶ್ರೀಕೃಷ್ಣಪರಮಾತ್ಮನು ಒಪ್ಪಿಕೊಂಡರೆ ವಿವಾಹವು ನಿರಂತರವಾಗಿ ಸಾಗುತ್ತದೆ. ಚಿಂತೆ ಬೇಡೆನಲು ಆದಕ್ಕೆ ವಿರಾಟರಾಯನು ಅವನು ಅದಕ್ಕೆ ಒಪ್ಪಿಕೊಳ್ಳಲಿ ಅಥವಾ ಆದಕ್ಕೆ ಒಪ್ಪಿಕೊಳ್ಳದೇ ಇರಲಿ ಗುರು ಮುರಾರಿಯನ್ನು ತೋರಿಸುವಿರಾದರೆ ಕೃತಾರ್ಥರು ತಾವೆನುತ ಹಿಗ್ಗಿದನು ಮತ್ಸ್ಯನೃಪನು.

೨೪) ಧರ್ಮನಂದನನು ಹರ್ಷದಿಂದ ವಿವಿಧ ಬಟ್ಟೆಗಳನ್ನು ಕಟ್ಟಿಸಿ, ಹರುಷದಿಂದ ಬಿನ್ನಹದ ಓಲೆಗಳನ್ನು ಬರೆಯಿಸಿದನು. ವೇಗಾಯಿಲ ದೂತರನ್ನು ಅಟ್ಟಿದನು. ಚರರು ಪಯಣದ ಮೇಲೆ ಪಯಣದಲಿ ಕೃಷ್ಣರಾಯನ ಪುರಕೆ ಬಂದರು.

೨೫) ತಾವು ಬರುವ ಬಿನ್ನಹವನ್ನು ಮಾಡಿ, ದ್ವಾರಪಾಲಕರ ಮೂಲಕ ಹೇಳಿಕಳುಹಿಸಿ, ಕೃಷ್ಣನ ಓಲಗವನ್ನು ಪ್ರವೇಶಿಸಿ ದರ್ಶನವನ್ನು ಮಾಡುತ್ತ ಆತನ ಚರಣಾಂಬುರುಹುಗಳಿಗೆ ವೈಯಿಕ್ಕಿ ಬಿನ್ನವತ್ತಳೆಯ ನಿಳುಹಿದರು.

೨೬) ಮುರವೈರಿಯು ನಸುನಗುತ ಅವರನ್ನು ಮನ್ನಿಸಿದನು. ಪಾಂಡವರ ಕುಶಲವನ್ನು, ದ್ರೌಪದಿಯ ಕ್ಷೇಮವನ್ನು ಕೇಳಲು, ನಿಮ್ಮ ಕರುಣಾ ಕಟಾಕ್ಷದಲ್ಲಿ ಅವರು ಕುಶಲರಾಗಿದ್ದಾರೆಂದರು.

೨೭) ಕಡುಕರುಣಾಳು ಹರ್ಷದಲ್ಲಿ ಕೇಳಿದನು. ಹೊಂಪುಳಿಯೋಗಿ ಭಕ್ತರ ಮೇಲೆ ಬಹಳವಾದ ಪರಮ ಸ್ನೇಹ ಪಸರಿಸಿತು. ಯುಧಿಷ್ಠಿರನ ಏಳಿಗೆಯನ್ನು ಮತ್ತು ಕೌರವೇಶ್ವರನ ಕಾರ್ಯವೇನೆನುತ್ತ ರಾಕ್ಷಸರಿಗೆ ವೈರಿಸ್ವರೂಪದಲ್ಲಿರುವ ಶ್ರೀಕೃಷ್ಣಪರಮಾತ್ಮನು ತಲೆದೂಗಿದನು.

೨೮) (ಕಾಲಕ್ಕೆ ಕೂಡಿದಾಗ ಲೇಸಿನ ಮೇಲೆ ಲೇಸುಗಳು ಒದಗುವವು. ಭೂಪಾಲ ಕುಂತಿ ಸುರರಿಗೆ ಇದು ಪ್ರಥಮ ಮಂಗಲ ಕಾಣಿಕೆ.ಮೇಲೆ ತಂಗಿಯ ಮಗನ ಮದುವೆ. ಇದು ವಿಶಾಲ ಶುಭವಾದದ್ದು. ನಿಖಿಲಯಾದವರು ಜಾಲಿ ಪಯಣವನ್ನು ಮಾಡಲೆಂದು ಅಸುರಾರಿ ನೇಮಿಸಿದನು.)

೨೯) ಸೇವಕರಿಗೆ ಉಡುಗೊರೆ ಗಂಧಖಿಲಾಭರಣ ಕಪ್ಪುರ ವೀಳೆಯ ನಿತ್ತ ಆರಿದಿಶಾಪಟನು ಬೀಳುಕೊಟ್ಟನು. ರಾಜಾಜ್ಞೆಯನ್ನು ಬರೆಸಿ ದೂತರು ಬಂದು ಮತ್ಸ್ಯನ ಪುರವನ್ನು ಪ್ರವೇಶಿಸಿ ಶ್ರೀಕೃಷ್ಣಪರಮಾತ್ಮನ ಕರುಣ ದಳತೆಯನ್ನು ಪಾಂಡವರಿಗೆ ಬಿನ್ನವಿಸಿದರು.

೩೦) ಬಳಿಕ ಶುಭ ಮೂಹುರ್ತದಲ್ಲಿ ಪರಿವಾರ ಸಹಿತವಾಗಿ ಮತ್ಸ್ಯನ ಪಟ್ಟಣವನ್ನು ಪ್ರವೇಶಿಸಿದರು. ಇತ್ತ ವಿರಾಟ ನಗರದಲ್ಲಿ ಊರು ಸಿಂಗರಿಸಿ ಕೇರಿಯನ್ನು ಅಳವಡಿಸಿದರು. ನಿಖಿಳ ನೃಪರಿಗೆ ಬಳಿಯಲಟ್ಟದರು. ಈ ರೀತಿಯಾಗಿ ಅವರ ಉದಯ ಉತ್ತರೋತ್ತರವಾಯಿತು.

೩೧) ಗುಡಿ ಮನೆಗಳೊಳು ಚಪ್ಪರದ ಹೊದಕೆಯ ವಸ್ತ್ರಗಳು ಕಟ್ಟಲ್ಪಟ್ಟವು. ಪುರದ ನಾರಿಯರು ಆಭರಣಗಳನ್ನು ತೊಟ್ಟರು. ಕಳಸ ಕನ್ನಡಿ ಸಹಿತ ದೇಶಯಲಿ ಆನೆ, ಕುದುರೆ ಮತ್ತು ರಥಗಳು ಕೂಡಿಕೊಂಡು ಸಾಲಾಗಿ ಶ್ರೀಕೃಷ್ಣಪರಮಾತ್ಮನನ್ನು ನಡೆದು ಪಾಂಡವರು ಇದಿರುಗೊಂಡರು.

೩೨) ದೂರದಲ್ಲಿ ಗರುಡ ಬಾವುಟವನ್ನು ಕಂಡು ಪಲ್ಲಕ್ಕಿಯಿಂದ ಇಳಿದು ದ್ರುಪದ ವಿರಾಟ ಪಾಂಡವರು ಮತ್ತು ಸಮಸ್ತ ನೃಪಾಲಕರು ನಮಸ್ಕರಿಸಿದರು. ಬಳಿಕ ಕಾಲು ನಡಿಗೆಯಲ್ಲಿ ಬರುತ್ತಿರಲು ಆನೆಯಿಂದಿಳಿದು ಪರಮಾತ್ಮನು ನಸುನಗುತ ದಯಮಾಡಿಸಿದನು.

೩೩) ಇತ್ತ ಇವರಿಗೆ ಸಮಯವನು ಸುರರುತ್ತಮನು ನಿಘಮಾಗ ವನು ಅರಸಿದನು, ಅತ್ತಲತ್ತಲೇ ಸರಿವ ಮುನಿಗಳ ಮನಕ್ಕೆ ಮೈಗೂಡದ ಹೆತ್ತ ಮಕ್ಕಳನ್ನು ಇತ್ತಕರೆ, ಭಕ್ತರನ್ನು ಇತ್ತಕರೆ, ನೆನೆಯುವವರಿಗೆ ತನ್ನನ್ನು ಕೊಟ್ಟು ಬದುಕುವನೆಂಬ ದೇವತೆಗಳ ರಾಜನು ಬಂದನು.

೩೪) ಎರಡು ಸೆರೆಯ ತುಂಬಿ ರತ್ನವನ್ನು ಸುರಿದು ಭೂಪತಿ ಧರ್ಮ ನಂದನನು ಮೈಯಿಕ್ಕಿದನು. ವಿಮಲ ಭಕ್ತಿಯಲಿ ನರ ವೃಕೋದರ (ಭೀಮ)

ನಕುಲ, ಸಹದೇವರು ವಿರಾಟ ದ್ರುಪದ ಮೊದಲಾದ ಸಮಸ್ತ ರಾಜರು ಒಲವಿನಿಂದ ವೈಯಿಕ್ಕಿದರು.

೩೫) ಶಿರವನೆಗಹಿ ಯುಧಿಷ್ಠಿರನನ್ನು ಹಿಂದಿರುಗಲು ಬಿಡದೇ ಬಿಗಿದಪ್ಪಿ, ಭೀಮಾರ್ಜುನ ಮತ್ತು ನಕುಲ ಸಹದೇವರನ್ನು ಶ್ರೇಷ್ಠವಾದ ಪ್ರೇಮದಲಿ, ಹರ್ಷದಲ್ಲಿ ಬಿಗಿದಪ್ಪಿ ಭೂಮೀಶ್ವರನನ್ನು ಮನ್ನಿಸಿದನು. ವಿಳಾಸಿನಿಯ ವಿಡಾಯಿಯಲ್ಲಿ ದ್ರೌಪದಿಯು ಬಂದು ಅಚ್ಯುತನನ್ನು ಕಂಡಳು.

೩೬) ಕಾಣಿಯ ಕೈಕೊಂಡು ರಾಯನ ರಾಣಿಯನ್ನು ಮನ್ನಿಸಿ, ತನ್ನ ರಾಣಿಯವಾಸದ ಹೊರಗೆ ನೇಮವ ಕೊಟ್ಟು ಕಳುಸಿದನು. ರಾಣಿರುಕ್ಮಿಣಿ ಮೊದಲಾದ ಯಾದವ ಅಕ್ಷೋಹಿಣಿ ಎಲ್ಲ ಅರಸಿಯರಿಗೆ ಕಾಣಿಕೆಯನ್ನು ಕೊಟ್ಟು ನಮಸ್ಕರಿಸಿ ಒಲವಿನಲಿ ದ್ರೌಪದಿಯು ಕಂಡಳು.

೩೭) ಎಲ್ಲರಗೂ ದರ್ಶವನಿತ್ತಿರಲು ವಸುದೇವ ದೇವಕಿದೇವಿಯರ ಸಂಕರಷಣ ಉಗ್ರಸೇನ ಮೊದಲಾದವರನ್ನು ಧರ್ಮಜನು ಕಂಡನು. ಸುಭದ್ರಾದೇವಿ ಭಾವಂದಿರಿಗೆ ವಂದಿಸಿದಳು. ಹರ್ಷದಿಂದ ಬಂದ ಅಭಿಮನ್ಯು ಪಾಂಡವರನ್ನು ಅಪ್ಪಿದನು.

೩೮) ರಾಕ್ಷಸರಿಗೆ ವೈರಿಸ್ವರೂಪದಲ್ಲಿರುವ ಶ್ರೀಕೃಷ್ಣಪರಮಾತ್ಮನು ನಗರವನ್ನು ಪ್ರವೇಶಿಸಿದನು. ಜನ ಕಿಕ್ಕಿರಿದು ನೆರೆಯಲು ಬೀದಿಯಲ್ಲಿ ಧೂಳಿ ಕವಿಯಿತು. ಮತ್ತು ಹೊಗಳುವ ಶ್ರುತಿತತಿಯು ಕೈಯಿಕ್ಕಿ ಕಳೆದನು. ಪಾಂಡುಸುತರಿಗೆ ಪರಮಾತ್ಮನು ಸಿಕ್ಕಿದನು. ಹರಿಯನುತ ಇದ್ದಿತು ಪಂಡಿತ ಸಮೂಹವು.

೩೯) ಮೇಲೆ ಬೀಳುವ ಜನರನ್ನು ಕೈಗೋಲಿನವ ಅಪ್ಪಳಿಸೆ, ಲಕ್ಷ್ಮೀಲೋಲನು ಪುರಜನರಿಗೆಲ್ಲ ದರ್ಶನವನಿತ್ತು ಮೇಲು ನೆಲೆಯ ಉಪ್ಪರಿಗೆಗಳ ವರಬಾಲೆಯರ ಕಡೆಗಂಗೆಳೆವ ಸಿವಾಳಿಗಳ ಕೈಕೊಳ್ಳುತ್ತ ರಾಜಮಂದಿರವನ್ನು ಹೊಕ್ಕನು.

೪೦) ಆರತಿಗಳನ್ನು ಹಿಡಿದರು. ಬಣ್ಣದ ದೀಪಗಳು ಕಾಣಿಸಿದವು. ನೆಲವನ್ನು ಪೋಷಿಸುವ ಭೀಮಾರ್ಜುನರು ಕೈಗೊಡೆ ಧರ್ಮನಂದನನು ಹಿಡಿದ ಕೈದೀವಿಗೆಗಳನು ಕೈದುಡುಕಿ ತಿವಿದಾಡುವ ಸುಕಾಂತಿಯ ಮಣಿಮಯ ಪೀಠದಲ್ಲಿ ಅಸುರಾರಿ ಕುಳಿತನು.

೪೧) ಅಸುರಾತತಿಯು ನಸುಗುತ ಕುಂತಿಕುಮಾರರ ಮೇಳದಲಿ ಭೂಮಿಪಾಲರನ್ನು ಬೀಳುಕೊಟ್ಟನು. ಕುರುಭೂಪಾಲನನ್ನು ಮೈದಣಿದು ಸೋಲಿಸಿ ಉಚಿತವ ಮಾಡಿದ ರಾಜ್ಯವನಾಳುವ ಹದವುಂಟೇ? ನಿಮ್ಮ ಆಳಾಪ ನೆಂದನು

೪೨) ದನಕರುಗಳು ಇತ್ತ ಮರಳಿದವು, ಅಹಿತರು ಅತ್ತಸರಿದರು. ಮತ್ಸ್ಯನು ನಮ್ಮ ಐವರನ್ನು ತಮ್ಮವರೆಂದು ತಿಳಿದುಕೊಂಡು ವಿನಯದಲ್ಲಿ ಕೊಂಡಾಡಿದನು. ಸುಭದ್ರಾನಂದನ ಮತ್ತು ಉತ್ತರೆಯ ಮದುವೆಯ ಸಲುವಾಗಿ ನಿಮ್ಮನ್ನು ಕರೆಯಲ್ಪಟ್ಟದೆಯೆಂದು ನೃಪತಿಯು ಬಿನ್ನಹ ಮಾಡಿದನು.

೪೩) ಕೊಳುಕೊಡೆಯಲ್ಲಿ ಯಾವ ವ್ಯತ್ಯಯವೂ ಬಾರದು. ಏಕೆಂದರೆ ವಿರಾಟನದು ವಸುವಿನ ಕುಲ, ನೀವು ಇಂದು ವಂಶಾವಳಿಯವರು. ಅಭಿಜಾತ್ಯದಲ್ಲಿ ಉಭಯತರಲ್ಲಿಯೂ ಹಳಿವುಗಳಿಲ್ಲ. ಉಭಯತರೂ ಬಲನುಡಿಗಳಲ್ಲಿ ದೈವಶಕುನಾವಳಿಗಳಲ್ಲಿ ಉತ್ತಮರು ಎಂದಮೇಲೆ ಕೇಳುವದೇನು.? ಹರ್ಷದಲ್ಲಿ ಮಂಗಳ ಮೂಹೂರ್ತವನ್ನು ಮಾಡಿರಿ ಎಂದನು.

೪೪) ಒಸಗೆಯಲಿ ನಿಸ್ಸಾಳತತಿ ಗರ್ಜಿಸಿತು, ಅಖಿಳ ಜನಂಗಳು ಉತ್ಸಾಹಿಸಿತು. ವೇದೋಕ್ತವಾಗಿ ಕನ್ಯಾವರಣವಾಯಿತು. ಅಭಿಮನ್ಯುವನ್ನು ಸಿಂಗಾರ ಮಾಡಲಾಯಿತು. ಯದು, ಪಾಂಚಾಲ, ಮತ್ಸ್ಯ ಪ್ರಸರದಲ್ಲಿ ಮಟ್ಟಕ್ಕಿ, ಜೀರಿಗೆ; ಬೆಲ್ಲ ಅನುವಾಯ್ತು.

೪೫) ವರಮೂಹೂರ್ತದ ಘಳಿಗೆ ಬಟ್ಟಲ ಭರಿತದೊಳು ಪುಣ್ಯಾವಹದ ವಿಸ್ತರಿದ ಅಕ್ಷತೆ ತುಂಬಿ ವಿಮಳಮಂಟಪಕೆ ತಂದರು. ಪರಮ ಋಷಿಗಳು ಹೋಮದಲಿ ಶಿಖಿತಳೆದು ವರಿಸಲಿಕ್ಕೆಂದು ವರನ ತಂದರು. ಕುಮಾರಿ ಉತ್ತರೆಯು ವೈದಿಕ ರೀತಿಯಿಂದ ವರನ ವಾಮದಲಿ ಬಂದಳು.

೪೬) ಉತ್ಸಾಹದಲ್ಲಿ ಗುರುದೈವ, ಬ್ರಾಹ್ಮಣರು ಸಭೆಯನ್ನಾರಾಧಿಸಿದರು. ಭೂಮಿಪತಿಗಳು ವಸ್ತ್ರ, ಉಡುಗೊರೆ, ರತ್ನಭೂಷಣವನ್ನು ಇತ್ತರು. ಈಶ್ವರನಿಗೆ ಸಮಾನರಾದ ವೀರನಾಗೆಂದುಭಗಮನೆಯರು, ಶ್ರೀಕೃಷ್ಣನು ಆತನರಸಿಯರು, ಹರುಷದಿಂದ ವಧೂ-ವರರನ್ನು ಹರಿಸಿದರು.

೪೭) ಇದು ಸಭೋಗಗದ ಗರುಡಿ; ಬಹು ಸಂಪದದ ನೆಲಮನೆ; ಸೊಂಪಿನ ಆಗರ, ಇದು ಪರಾನಂದ ಪ್ರವಾಹದ ಜನ್ಮಭೂಮಿ ಸಂತೋಷದ ಸ್ಥಾನ; ವಿಮಲಾಭ್ಯುದಯ ಓಲಗಶಾಲೆ; ಲಕ್ಷ್ಮೀಮನೆ ಎನ್ನುವಂತೆ ಅಭಿಮನ್ಯುವಿನ ವಿವಾಹ ಶೋಭಿಸಿತು.

೪೮) ವಿವಾಹದ ಚತುರ್ಥಿಯಂದು ರಾತ್ರಿ ಕನ್ಯಾವರರು ಪುರದಲ್ಲಿ ಉತ್ಸಾಹದಿಂದ ಅದ್ಭುತ ಚಾತುರಂಗದಲ್ಲಿ ಮೆರೆದರು. ಮರುದಿವಸ ಯಾಗದ ಕೊನೆಯಲ್ಲಿ ಮಾಡುವ ಮಂಗಳ ಸ್ನಾನದಲ್ಲಿ ಕಳೆದರು. ಭೂಮಿ ಯುದ್ಧಕ್ಕೂ ಪನ್ನೀರುಗಳ ಹೊನಲಿಟ್ಟು ದೆಸೆದೆಸೆಗೆ ತಂಪು ಪಸರಿಸಿತು.

೪೯) ವಿರಾಟರಾಜನು ರಾಜ್ಯ, ಭಂಡಾರ, ಆನೆ, ಕುದುರೆ, ದಾಸಿಯರು, ಇತ್ಯಾದಿ ಅಸಂಖ್ಯಾತ ಬಳುವಳಿಯನ್ನು ಅಳಿಯನಿಗಿತ್ತು ಗೌರವಿಸುವದಲ್ಲದೇ ಮದುವೆಗೆಂದು ಬಂದಿದ್ದ ಬಂಧು ಬಾಂಧವರಿಗೆ ರಾಜಾಧಿರಾಜರಿಗೂ ಅನೇಕ ವಸ್ತುವಾಹನಗಳನ್ನು ಕೊಟ್ಟು ಸಂತೋಷಗೊಳಿಸಿದನು.

೫೦) ಹೀಗೆ ಅಭಿಮನ್ಯುವಿನ ವಿವಾಹವು ಮಹಾದಯಾಂಬುಧಿ ಕೃಷ್ಣರಾಯನ ಮಾರ್ಗದರ್ಶನದಿಂದ ವೈಭವದಲ್ಲಿ ಜರುಗಿತು. 'ಭೂಮಿಯನ್ನು ನಾವು ಒತ್ತೆ ಇಟ್ಟರೂ ಸತ್ಯವನ್ನು ಕಾಯ್ದುಕೊಂಡೆವು' ಎಂದು ಪಾಂಡವರೂ ಪಾಂಚಾಲಿಯೂ ಭೂಪ ನಾರಾಯಣನಿಗೆ (ಶ್ರೀಕೃಷ್ಣ ಪರಮಾತ್ಮನಿಗೆ) ಕರುಣಿಸು ಎಂದರು.

ಶ್ರೀಮದ ಚಿಂತ್ಯ ಗದುಗಿನ ವೀರನಾರಾಯಣ ಚರಣಾರವಿಂದ ಮಧುಪಾನ ಪರಿಪುಷ್ಟ ಷಟ್ಪದಿ ಸಮೂಹವಾದ ಶ್ರೀಮತ್ ಯೋಗಿಂದ್ರನಾದ ಕುಮಾರವ್ಯಾಸನಿಂದ ರಚಿತವಾದ 'ಕರ್ನಾಟಕ ಭಾರತ ಕಥಾ ಮಂಜರಿಯಲ್ಲಿ ವಿರಾಟಪರ್ವಸಂಗ್ರಹವು ಮುಗಿಯಿತು.

## ವಿರಾಟ ಪರ್ವಸಂಗ್ರಹದ ವಿಮರ್ಶೆ

ಮಹಾಭಾರತದ ತಿರುಳೆಂದರೆ ವಿರಾಟಪರ್ವವೆಂದು ಹೇಳಬಹುದು. ಪಾಂಡವರ ಅಜ್ಞಾತವಾಸವು ಕೊನೆಗೊಳ್ಳುವದು ವಿರಾಟಪರ್ವದ ಕೊನೆಯಲ್ಲಿಯೇ.ಮತ್ತು ಅಭಿಮನ್ಯುವಿನ ಮದುವೆಯು ಪಾಂಡವರ ಅಭ್ಯುದಯಕ್ಕೆ

ಆದಿಯೆನ್ನಬಹುದು. ಯಾವ ಕಾರಣದಿಂದಲೋ ಏನೋ, ನಮ್ಮವರು ರಾಮಾಯಣದಲ್ಲಿ ಸುಂದರಕಾಂಡವನ್ನು ಉತ್ಸುಕತೆಯಿಂದ ಓದುವಂತೆ ಮಹಾಭಾರತದಲ್ಲಿ ವಿರಾಟಪರ್ವವನ್ನು ಓದಲು ಪ್ರಾರಂಭಿಸುತ್ತಾರೆ. ಮಹಾಭಾರತದ ವಿರಾಟಪರ್ವದಲ್ಲಿ ಮೈನಿಮಿರಿಸುವಂತಹ, ಮತ್ತು ಹೃದಯಸ್ಪರ್ಶಿ ಘಟನೆಗಳಿವೆ. ಈ ಪರ್ವವನ್ನು ಗಮನಿಸಿದಾಗ ಕುಮಾರವ್ಯಾಸ ಕವಿಯು ಉತ್ತಮ ಸಂಗ್ರಹಕಾರನಾಗಿ ಎದ್ದು ಕಾಣುತ್ತಾನೆ. ಪಾಂಡವರು ವಿರಾಟರಾಯನ ಆಸ್ಥಾನಕ್ಕೆ ಬಂದು ಅಲ್ಲಿ ಆಶ್ರಯ ಪಡೆದದ್ದು, ಕೀಚಕನು ದ್ರೌಪದಿಯನ್ನು ಕಾಮಿಸಿ ಭೀಮಸೇನನಿಂದ ಹತನಾಗಿದ್ದು, ಕೌರವರು ವಿರಾಟರಾಯನ ಆಸ್ಥಾನಕ್ಕೆ ಬಂದು ಅಲ್ಲಿಯ ತುರುಗಳನ್ನು ಕದ್ದದ್ದು, ಕೌರವ ಮತ್ತು ಪಾಂಡವರ ಯುದ್ಧ, ಕೌರವರ ಸೋಲು, ಉತ್ತರನ ಪೌರುಷ ಹಾಗೂ ಉತ್ತರೆಯ ಮದುವೆ ಮುಂತಾದ ವೈವಿಧ್ಯ ಪೂರ್ಣವಾದ ಘಟನೆಗಳು ಇಲ್ಲಿ ಉತ್ತಮವಾಗಿ ಚಿತ್ರಿತವಾಗಿವೆ. ಇಲ್ಲಿಯ ಯಾವ ಅಧ್ಯಾಯಗಳೂ ಬೀಳಾಗಿ ತೋರಿಲ್ಲವೆನ್ನಬಹುದು.

ಮಹಾಭಾರತದಲ್ಲಿ ಪ್ರಧಾನವಾಗಿ ಚಿತ್ರಿತವಾಗಿರುವ ರಸವು ವೀರರಸವೆಂದು ಹೇಳಬಹುದು. ಆದರೆ ಇಲ್ಲಿ ಆ ರಸಕ್ಕೆ ಯಥೇಚ್ಛವಾಗಿ ಅವಕಾಶವು ದೊರೆಕಿದೆ. ಮಹಾಭಾರತದಲ್ಲಿ ಯುದ್ಧ ವರ್ಣನೆಗಳು ಬಹಳವಾಗಿ ಮತ್ತು ವಿಸ್ತಾರವಾಗಿ ಬಂದಿರಬಹುದು. ಆದರೆ ಈ ಪರ್ವದಲ್ಲಿ ಯುದ್ಧದ ವರ್ಣನೆ ತಕ್ಕಮಟ್ಟಿಗೆ ಬರುತ್ತವೆಂದು ಹೇಳಬಹುದು.

ವಸ್ತು ಮತ್ತು ರಸದ ಬಗ್ಗೆ ವಿರಾಟಪರ್ವವನ್ನು ವಿಮರ್ಶಿಸಿದರೆ ಎರಡು ಪ್ರಸಂಗಗಳು ಎದ್ದು ಕಾಣುತ್ತವೆ. ಇವುಗಳಲ್ಲಿ ಮೊದಲನೆಯದು ಕೀಚಕನು ಪಾಂಚಾಲಿಯನ್ನು ತಡವಿ ಭೀಮಸೇನನಿಂದ ನಿಃಪಾತ ಹೊಂದಿದ ಸಂದರ್ಭ, ಇನ್ನೊಂದು ಸಂದರ್ಭವೆಂದರೆ ಉತ್ತರನು ತನ್ನ ಪೌರುಷವನ್ನು ತೋರಿಸುವಲ್ಲಿ ಕವಿ ಕುಮಾರವ್ಯಾಸನು ಹಾಸ್ಯದ ಹೊಳೆಯನ್ನೇ ಹರಿಸಿದ್ದಾನೆಂದು ಹೇಳಬಹುದು.

ಕನ್ನಡ ಮಹಾಭಾರತದಲ್ಲಿ ಹೆಚ್ಚಾಗಿ ವೀರರಸಕ್ಕೆ ಪ್ರಾಧಾನ್ಯ ಸಿಕ್ಕಂತೆ ಶೃಂಗಾರ ರಸಕ್ಕೆ ಸಿಕ್ಕಿಲ್ಲ. ಕನ್ನಡದ ಕವಿಯಾದ ಕುಮಾರವ್ಯಾಸನು ಭಾರತದ

ಹಿರಿಮೆಯನ್ನು ಹೇಳುವ ಸಂದರ್ಭದಲ್ಲಿ ಆ ರಸದ ಸ್ಥಾನ ಏನು ಎಂಬುದನ್ನು ಸೂಚಿಸಿದ್ದಾನೆ. ಇದಲ್ಲದೆ ಆಯಾ ಸಂದರ್ಭಕ್ಕನುಗುಣವಾಗಿ ಚಿತ್ರಣ ವನ್ನು ಸಹ ಉತ್ತಮವಾಗಿ ಚಿತ್ರಿಸಿದ್ದಾನೆ.

ವಿರಾಟ ನಗರದಲ್ಲಿ ದ್ರೌಪದಿಯ ಸ್ಥಿತಿ ಬಹ ಇಕ್ಕಟ್ಟಿನದಾಗಿತ್ತು. ವೀರರಾದ ಅವಳ ಗಂಡಂದಿರು ಎದುರಿಗೆ ಇದ್ದರೂ ಸಹ ಅವಳ ರಕ್ಷಣೆಗೆ ಬರುವಹಾಗಿರಲಿಲ್ಲ. ಅವಳ ದೈಹಿಕ ಸೌಂದರ್ಯವೇ ಅವಳಿಗೆ ಶತ್ರು ವಾಗಿತ್ತು. ಅವಳ ಲೋಕೋತ್ತರವಾದ ಸೌಂದರ್ಯವನ್ನು ಕಂಡು ಕೀಚ ಕನು ಅವಳಲ್ಲಿ ಮೋಹಗೊಂಡನು. ಇದರಲ್ಲಿ ಆಶ್ಚರ್ಯವೆನಿಲ್ಲವೆಂದು ಹೇಳ ಬಹುದು. ವಿರಾಟನಗರದಲ್ಲಿ ಕೀಚಕನೊಬ್ಬನೇ ಶೂರ ವ್ಯಕ್ತಿಯಾಗಿದ್ದನು. ಅವನು ಬಲಾಢ್ಯ ಇದಲ್ಲದೇ ದೊರೆಯ ಹೆಂಡತಿಯ ತಮ್ಮನು ಅವನು. ಯಾವಾಗ ಕೀಚಕನು ದ್ರೌಪದಿಯನ್ನು ಹೆಂಗಳೆಯರ ಮೇಳದಲ್ಲಿ ನೋಡಿ ದನೋ ಅಂದೇ ಅವನ ಮನಸ್ಸು ಅವಳಲ್ಲಿ ಗಾಢವಾಗಿ ನಟ್ಟಿತು. ಕಿಚಕನಲ್ಲಿ ಪರಾಕ್ರಮಕ್ಕೆ ತಕ್ಕ ಸಂಯಮವಿಲ್ಲ. ಕೀಚಕನು ದ್ರೌಪದಿಯನ್ನು ನೋಡು ತ್ತಿದ್ದ ಹಾಗೆಯೇ ಅವನ ಅಕ್ಕ ತಮ್ಮನಿಗೆ ಎಚ್ಚರಿಸಿದರೂ ಅವನು ಅದನ್ನು ಗಮನಿಸಲಿಲ್ಲ. ಇದಲ್ಲದೇ ದ್ರೌಪದಿಯು ಸಹ ಕೀಚಕನನ್ನು ಕಂಡು ಬಗೆ ಬಗೆಯಾಗಿ ಬೋಧಿಸಿದಳು; ಆದರೆ ಆಗ ಅವನು ಕಾಮಾಂಧನಾಗಿದ್ದನು. ನಿರ್ವಾಹವಿಲ್ಲದೇ ಅಕ್ಕನನ್ನು ಕೀಚಕನು ಮೊರೆಹೋದನು. ಆಕೆ 'ಪರಸತಿ ಮೇಳ ಲೇಸಲ್ಲ' ಎಂದು ಬೋಧಿಸಿದರೂ ದ್ರೌಪದಿಯನ್ನು ಅವನ ಬಳಿಗೆ ಕಳುಹಿಸಿದಳು. ಅವಳು ತನ್ನ ಇಚ್ಛೆಯನ್ನು ಪೂರೈಸದಿದ್ದಾಗ ಅವಳ ತುರು ಬನ್ನು ಹಿಡಿದು ಒದೆದನು. ಮಾರನೆ ದಿನ ದ್ರೌಪದಿಯು ಮಾತಿನಿಂದ ಆಕೆ ತನ್ನನ್ನು ರಮಿಸಿದಳೆಂದೇ ಹಿಗ್ಗಿ, ಗರುಡಿಯ ಮನೆಯಲ್ಲಿ ಭೀಮನೊಡನೆ ಹೋರಾಡಿ ಅವನು ಪ್ರಾಣವನ್ನು ತೆಗೆದು ಕೀಚಕನ ಅವತಾರವನ್ನು ಮುಗಿಸಿದನು. ಇದು ಕೀಚಕ ವಿರಹದ ಶೃಂಗಾರ ಚೇಷ್ಟೆ; ಮತ್ತು ಶೃಂಗಾ ರಾಭಾಸ. ಈ ಪ್ರಸಂಗವನ್ನು ಓದುತ್ತಿದ್ದಂತೆಯೇ ದ್ರೌಪದಿಯ ಮೇಲೆ ಅನು ಕಂಪ ಹುಟ್ಟುತ್ತದೆ. ಆದರೆ ಕೀಚಕನ ಮೇಲೆ ಸ್ವಲ್ಪವೂ ಅನುಕಂಪ ಹುಟ್ಟು ವದಿಲ್ಲ. ಕೇವಲ ಅನುಕಂಪದಿಂದೇನಾಗುತ್ತದೆ? ಕೀಚಕನ ಸಂಹಾರದಿಂದ ಓದುಗರ ಮನಸ್ಸು ಹಗುರಾಗುತ್ತದೆ. ಈ ಸಂದರ್ಭದಲ್ಲಿ ಕುಮಾರವ್ಯಾಸನು

ಕಾಮುಕನ ತಾಪದುರಿಯನ್ನು ಅತಿ ಉತ್ತಮವಾಗಿ ಚಿತ್ರಿಸಿದ್ದಾನೆ ಎಂದು ಹೇಳಬಹುದು.

ಕೀಚಕನ ಪ್ರಸಂಗದಲ್ಲಿ ವಿರಾಟಪರ್ವವನ್ನು ಓದುತ್ತಿದ್ದಂತೆಯೇ ಓದುಗರ ಮನಸ್ಸು ದ್ರೌಪದಿಯ ಪಾತ್ರದ ಮೇಲೆ ಕೇಂದ್ರೀಕೃತವಾಗುತ್ತದೆ. ಕೀಚಕನ ಉಪಟಳದಿಂದ ದ್ರೌಪದಿಯ ಸಂರಕ್ಷಣೆ ಯಾರಿಂದ? ಎಂಬ ವಿಚಾರವು ಓದುಗರಲ್ಲಿ ಸುಳಿದಾಡುತ್ತದೆ. ಕೀಚಕನನ್ನು ಕೊಲ್ಲಬೇಕೆಂದು ಭೀಮನು ಆಲದಮರವನ್ನು ನೋಡಿದರೂ ಧರ್ಮರಾಯನು ಅದಕ್ಕೆ ಅಡ್ಡವಾದನು. ದ್ರೌಪದಿಯು ಎಷ್ಟೋ ಕ್ರೂರ ಶಿಕ್ಷೆಯನ್ನು ಅನುಭವಿಸಿ ಕೊನೆಗೆ ಭೀಮನನ್ನು ಮೊರೆಹೊಕ್ಕಳು.

ಆದರೆ ಭೀಮಸೇನನು ದ್ರೌಪದಿಗೆ ಸುಲಭವಾಗಿ ಒಲಿಯಲಿಲ್ಲ, ದ್ರೌಪದಿಯ ಬಗ್ಗೆ ವೃಕೋದರನಿಗೆ ಸಹಾನುಭೂತಿ ಇರಲಿಲ್ಲವೆಂದಲ್ಲ,ಆದರೆ ಅವನಿಗೆ ಅಣ್ಣನ ಆಜ್ಞೆ ಅವನ ಕೈಯನ್ನು ತಡೆಯುತ್ತಿತ್ತು. ಇದೇ ರೀತಿಯಾಗಿ ದುಃಶಾಸನನನ್ನು ಕೊಲ್ಲಬೇಕೆಂದಾಗ ಅಣ್ಣನು ಅಡ್ಡಬಂದನು. ಕೀಚಕನನ್ನಾದರೂ ಕೊಲ್ಲಬೇಕೆಂದಾಗ ಅಣ್ಣ ಧರ್ಮರಾಜನ ಕಣ್ಸನ್ನೆಯಿಂದ ಸುಮ್ಮನೆ ಹಿಂದಿರಗಬೇಕಾಯಿತು. ಅವಳ ಮಾನವನ್ನು ಕಾಪಾಡಲು ತಾನೊಬ್ಬನೇ ಏನು ಹೊಣೆ ಹೊತ್ತಿರುವನೊ? ಎಂದು ಸುಮ್ಮನೆ ಕುಳಿತು ಬಿಟ್ಟನು. ಆಗ ದ್ರೌಪದಿಯು ಗಂಡನನ್ನು ಬೈದಳು, ತನ್ನ ದೈವವನ್ನು ನಿಂದಿಸಿಕೊಂಡಳು. ಕೌರವನು ಪುಣ್ಯವಂತ ಎಂಡಳು. ಭೀಮಸೇನನು ಯಾವ ಅಸ್ತ್ರಕ್ಕೂ ಮಣಿಯದಿದ್ದಾಗ ದ್ರೌಪದಿಯು ತನ್ನ ಕೊನೆಯ ಅಸ್ತ್ರವನ್ನು ಪ್ರಯೋಗಿಸಿದಳು. ಇನ್ನು ನೀವು ನಿಮ್ಮ ಅಣ್ಣನ ಅಜ್ಞೆಯನ್ನು ಮೀರದಂತೆ ವರ್ತಿಸಬಹುದು. ಆದರೆಮಾತ್ರ ಕಾಮನಿಯ ಕೇಳಿಯಲಿ ನೆನೆವುದು, ನನ್ನ ಉದ್ದಾಮತನ ಸೈರಿಸುವದು ಎಂದು ದ್ರೌಪದಿಯು ಭೀಮಸೇನನಿಗೆ ನುಡಿಯಲಾಗಿ, ಅವನ ಹೃದಯ ಕರಗಿ ನೀರಾಗಿ ಭೀಮಸೇನನು ದ್ರೌಪದಿಯನ್ನು ಸಂತೈಸಿ, ನಿನ್ನ ಕೆಲಸವನ್ನುಮಾಡಿಕೊಡುವೆನೆಂದನು.

ಈ ಸನ್ನಿವೇಶದ ತುಂಬೆಲ್ಲ ಕವಿ ಕುಮಾರವ್ಯಾಸನು ಓದುಗರ ಮನಸ್ಸನ್ನು ದ್ರೌಪದಿಯ ಕಡೆಗೆ ಸೆಳಿದಿದ್ದಾನೆ. ಇದು ಸಹಜವಾದ ಮಾತೆಂದು

ಹೇಳಬಹುದು. ಭಾರತದಲ್ಲಿ ತುಂಬ ಕಷ್ಟವನ್ನು ಸಹಿಸಿದ ವ್ಯಕ್ತಿಯೆಂದು ದ್ರೌಪದಿ, ಮತ್ತು ಅವಳಿಗಾಗಿ ಮಹಾಭಾರತ ಹುಟ್ಟಿದ್ದು, ಅವಳ ಕಷ್ಟ ಕಾರ್ಪಣ್ಯವನ್ನು ನೆನೆದಾಗ ಪ್ರತಿಯೊಬ್ಬರ ಹೃದಯ ನೀರಾಗಿ ಹರಿಯುತ್ತದೆ. ಕೀಚಕನ ಪಾಶವೀಯ ಕಾಮದ ಪರಾಭವನ್ನು ನಾವು ಬಯಸುವ ಕಾರಣ ಈ ಸಹಾನುಭೂತಿ ಹೆಚ್ಚಿಸಿತ್ತು;ದ್ರೌಪದಿಯು ಭೀಮನನ್ನು ಕೆರಳಿಸುವ ಸಂದರ್ಭ ದಲ್ಲಿ ಕೆಲವು, ಗಾಂಭೀರ್ಯದ ಮಾತುಗಳನ್ನು ಆಡಿರಬಹುದು. ಆದರೆ ಆ ದ್ರೌಪದಿಗಾದ ಸಂಕಟವನ್ನು ಓದುಗರು ನೆನೆದಾಗ ಅವು ಕ್ಷಮಾರ್ಹವೆನಿ ಸುತ್ತವೆ.

ಕನ್ನಡದ ಕವಿಯಾದ ಕುಮಾರವ್ಯಾಸನು ಶ್ರೇಷ್ಠದರ್ಜೆಯ ಕವಿಯೆನಿಸಿ ಕೊಂಡಿದ್ದಾನೆ. ಇದಲ್ಲದೇ ಈ ವಿರಾಟಪರ್ವಸಂಗ್ರಹದಲ್ಲಿ ಇವನು ಶ್ರೇಷ್ಠ ಸಂಗ್ರಹಕಾರನೂ ಎನಿಸಿಕೊಂಡಿದ್ದಾನೆ. ಇವನು ವ್ಯಾಸವಿರಚಿತ ಮಹಾ ಭಾರತವನ್ನು ಹೆಜ್ಜೆಹೆಜ್ಜೆಗೂ ಅನುಸರಿಸಿದ್ದರೂ ಅದರಲ್ಲಿ ಬರುವ ಉಪಕಥೆ ಗಳನ್ನು, ಧರ್ಮ ಪ್ರಸಂಗಗಳನ್ನು ಕೈಬಿಟ್ಟಿದ್ದಾನೆ ಎಂದು ಹೇಳಬಹುದು. ಮೇಲಾಗಿ ಇವನು ಮೂಲ ಸಂಸ್ಕೃತ ಮಹಾಭಾರತದಿಂದ ಸುಂದರ ವಾಗಿ ಸಂಗ್ರಹಿಸಿದ್ದಾನೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಉತ್ತರನ ಪ್ರಸಂಗ ಇಷ್ಟು ಸುಂದರವಾಗಿ ಬಂದಿರುವದೇ ಇದಕ್ಕೆ ಸಾಕ್ಷಿ.

ಕುಮಾರವ್ಯಾಸ ವಿರಚಿತ ಕರ್ನಾಟ ಭಾರತ ಕಥಾ ಮಂಜರಿ ಕೃಷ್ಣ ಕಥೆಯೆಂದು ಹೇಳಬಹುದು. ಕೃಷ್ಣನ ಮಹಿಮೆಯನ್ನು ಕವಿ ಕುಮಾರ ವ್ಯಾಸನು ತನ್ನ ಕೃತಿಯಲ್ಲಿ ಹಾಡಿ ಕುಣಿದಿದ್ದಾನೆ. ಆದರೆ ಇವನು ಸಂಧಿಯ ಕೊನೆಯಲ್ಲಿ, ಸಮಯ ದೊರೆತಾಗ ಕವಿ ಶ್ರೀಕೃಷ್ಣಪರಮಾತ್ಮನ ಮಹಿಮೆ ಯನ್ನೇ ವರ್ಣಿಸುತ್ತಾನೆ. ಅಭಿಮನ್ಯುವಿನ ಮದುವೆಯ ಪ್ರಸಂಗದಲ್ಲಿ ಶ್ರೀಕೃಷ್ಣಪರಮಾತ್ಮನ ಆಗಮನದಿಂದ ಕವಿಯ ಸಂಯಮದ ಕಟ್ಟೆ ಒಡೆದು ಕೃಷ್ಣ ಭಕ್ತಿಯ ಪ್ರವಾಹವನ್ನು ಹರಿಸುತ್ತಾನೆ. ಅರ್ಜುನ, ಕೀಚಕ, ದ್ರೌಪದಿ, ದ್ರೋಣ, ಭೀಷ್ಮ ಮುಂತಾದ ಪಾತ್ರಗಳನ್ನು ಕವಿ ವೈಶಿಷ್ಟ್ಯಪೂರ್ಣವಾಗಿ ಚಿತ್ರಿಸಿದ್ದಾನೆ. ಈ ಎಲ್ಲ ದೃಷ್ಟಿಯಿಂದ ಗದುಗಿನ ಭಾರತ ಶ್ರೇಷ್ಠ ಕೃತಿಯೆನಿಸಿದೆಯನ್ನುವಲ್ಲಿ ಹೆಮ್ಮೆ ಪಡಬೇಕಾದ ಸಂಗತಿ ಯಾಗಿದೆ.

# ಪ್ರಶ್ನೋತ್ತರಗಳು

ಪ್ರಶ್ನೆ:–ಕುಮಾರವ್ಯಾಸ ಕವಿ ವಿರಚಿತ 'ವಿರಾಟಪರ್ವಸಂಗ್ರಹ'ದಲ್ಲಿ ಚಿತ್ರಿತವಾದ ಕೀಚಕನ ಸಂಹಾರದ ಪ್ರಸಂಗವನ್ನು ಮತ್ತು ಅದರ ಹಿನ್ನೆಲೆಯನ್ನು ವಿವರಿಸಿರಿ.

ಅಥವಾ

ಕೀಚಕನ ಸಂಹಾರವು ಏಕಾಯಿತು? ವಿವರಿಸಿರಿ.

ಉತ್ತರ:–ಪಾಂಡವರು ಅಜ್ಞಾತವಾಸವನ್ನು ಕಳೆಯುವದರ ಸಲುವಾಗಿ ಅವರು ವೇಷವನ್ನು ಬದಲಿಸಿಕೊಂಡು ವಿರಾಟ ನಗರಕ್ಕೆ ಬಂದು ಅಲ್ಲಿ ಕಾಲವನ್ನು ಕಳೆಯುತ್ತಿದ್ದರು. ಹೀಗಿರುವಾಗ ಸುದೀಷ್ಣಾದೇವಿಯ ತಮ್ಮನಾದ ಕೀಚಕನು ಒಮ್ಮೆ ತನ್ನ ಅಕ್ಕನನ್ನು ನೋಡುವದರ ಸಲುವಾಗಿ ಅರಮನೆಗೆ ಬಂದನು. ಆಗ ಅವಳು ತನ್ನ ತಮ್ಮನನ್ನು ಅತಿ ಆದರೋಪಚಾರದಿಂದ ಸತ್ಕರಿಸಿದಳು. ಈ ಆದರ ಸತ್ಕಾರದಿಂದ ಸಂತುಷ್ಟನಾದ ಆತನ ದೃಷ್ಟಿ ಸೈರಂಧ್ರಿ ವೇಷದಲ್ಲಿರುವ ದ್ರೌಪದಿಯ ಕಡೆಗೆ ಹೋಯಿತು. ಆಕೆಯ ಅನುಪಮ ಸೌಂದರ್ಯವನ್ನು ಕಂಡು ಆ ಕಣ್ಣುಗಳು ಅಲ್ಲಿಯೇ ನಾಟ ಹೋದವು. ಅದರೊಡನೆ ಆತನ ಹೃದಯದಲ್ಲಿ ಮನ್ಮಥನ ಮೊನಚಾದ ಬಾಣಗಳು ಆಳವಾಗಿ ನೆಟ್ಟವು. ಕೀಚಕನಿಗೆ ನಾಚಿಕೆ ಹೇಸಿಕೆವೆಂಬವು ಇಲ್ಲದಂತಾಯಿತು. ಅವನು ತನ್ನ ಘನತೆ ಗಾಂಭೀರ್ಯವನ್ನು ಗಮನಿಸದೇ ಅವಳನ್ನೇ ದಿಟ್ಟಿಸಿ ನೋಡುತ್ತ, ಅಕ್ಕಾ ಈ ಮನೋಹರಿ ಯಾರು? ಎಂದು ಬಾಯ್ಬಿಟ್ಟು ಕೇಳಿದನು. ಆಗ ರಾಣಿಯು 'ಅಯ್ಯಾ, ಈಕೆ ಗಂಧರ್ವರಮಣಿ, ಕಾರಣಾಂತರದಿಂದ ಇವಳು ನಮ್ಮನ್ನು ಬಂದು ಆಶ್ರಯಿಸಿದ್ದಾಳೆ. ಈಕೆಯ ಗಂಡಂದಿರು ಮಹಾಶೂರರು ಆದ್ದರಿಂದ ಈಕೆ ನಿನಗೆ ತಕ್ಕವಳಲ್ಲ' ಎಂದಳು.

ಸುದೀಷ್ಣೆಯ ಆ ಮಾತುಗಳಿಗೆ ಕೀಚಕನು ತಾತ್ಕಾಲಕವಾಗಿ ಸುಮ್ಮನೆ ಹೊರಟು ಹೋದನು. ಆದರೂ ಅವನ ಮನಸ್ಸು ಕೊರ್ಗಣೆಗಳಿಂದ ಘಾಸಿಯಾಗಿಹೋಗಿತ್ತು. ಆ ಗಾಯವನ್ನು ತಡೆಯಲಾರದೇ ಕೀಚಕನು ದ್ರೌಪದಿಯನ್ನು ಪುನಃ ಸಂಧಿಸಿ "ಸೈರಂಧ್ರಿ, ಮನ್ಮಥನಿಂದಾದ ಗಾಯಗಳಿಗೆ

ಸುದ್ದನ್ನು ಅರಿತವಳು ನೀನೊಬ್ಬಳೆ. ದಯವಿಟ್ಟು ನನ್ನನ್ನು ಬದುಕಿಸಿಕೋ" ಎಂದು ಬೇಡಿಕೊಂಡನು.

ಆಗ ದ್ರೌಪದಿಯು ಅವನ ಲಜ್ಜಾ ಹೀನವಾದ ಮಾತುಗಳನ್ನು ಕೇಳಿ ಆಕೆಯ ಕೋಪವು ಕೆರಳಿತು. ಆಗ ಅವಳು ದುರಾತ್ಮಾ, ನಿನ್ನ ವಂಶದ ಬೇರನ್ನೇ ಕೊಯ್ದುಕೊಳ್ಳಲು ಏಕೆ ಪ್ರಯತ್ನಿಸುತ್ತೀ ? ಹೀಗೆ ಕಾತರದಿಂದ ಕೆಟ್ಟ ಮಾತುಗಳನ್ನಾಡಿ ನನ್ನ ಪತಿಗಳಿಂದ ಮೃತ್ಯು ಮುಖವಾಗುವದನ್ನಾದರೂ ಗಮನಿಸಬೇಡವೇ ? ಎಂದಳು. ಇಷ್ಟು ಬೋಧಾತ್ಮಕವಾದ ಮಾತನ್ನು ಆಡಿದರೂ ಕೀಚಕನು ಅವುಗಳನ್ನು ಗಮನಕ್ಕೆ ತಂದುಕೊಳ್ಳಲಿಲ್ಲ. ಮತ್ತೂ ಅವನು ಅವಾಚ್ಯವಾದ ಮಾತುಗಳನ್ನಾಡಲು ಪ್ರಾರಂಭಿಸಿದನು. ಆಗ ದ್ರೌಪದಿಯು ಅಸಹ್ಯಗೊಂಡು, ಛೀ ಮೂರ್ಖ ಹೋಗುತ್ತ, ನಾಯಿ ಸಿಂಹಿಣಿಯನ್ನು ಬಯಸುವದುಂಟೆ ? ಎಂದು ಹೊರಟುಹೋದಳು. ಈ ರೀತಿಯಾಗಿ ದ್ರೌಪದಿಯು ನುಡಿದರೂ ಅವನು ಕಾಮೋನ್ಮತ್ತನಾಗಿದ್ದನು. ಅವಳ ವಿರಹದಿಂದ ಶಕ್ತಿಗುಂದಿ ಬುದ್ಧಿ ಕೆಟ್ಟು ಜೋಲು ಮೋರೆ ಹಾಕಿಕೊಂಡು ಅಕ್ಕನ ಬಳಿಗೆ ಹೋದನು. ಆಗ ಅಕ್ಕನ ಮುಂದೆ ಅವನು ತನ್ನ ವಿರಹವೇದನೆಯನ್ನು ತೋಡಿಕೊಂಡನು. ಮತ್ತು ಆ ಸೈರಂಧ್ರಿಯನ್ನು ನನಗೆ ಒಪ್ಪಿಸು ಎಂದನು. ಸುದೀಷ್ಣೆಗೆ ತಮ್ಮನ ಮಾತುಗಳನ್ನು ಕೇಳಿ ಕಣ್ಣಲ್ಲಿ ನೀರು ಬಂದವು. ಮರುದಿನ ಸೈರಂಧ್ರಿಯನ್ನು ಮನೆಗೆ ಕಳುಹಿಸಿಕೊಡುವದಾಗಿ ಮಾತು ಕೊಟ್ಟು ಬಿಳ್ಕೊಟ್ಟಳು.

ಕೀಚಕನು ವಿರಹ ವೇದನೆಯನ್ನು ತಾಳಲಸಾಧ್ಯವಾಗಿ ಇರುಳಿನ ಕ್ಷಣವೊಂದನ್ನು ಯುಗವನ್ನಾಗಿ ಕಳೆದನು. ಮರುದಿನ ಸೂರ್ಯೋದಯವಾಗುತ್ತಿದ್ದಂತೆಯೇ ಸುದೀಷ್ಣೆಯು ಸೈರಂಧ್ರಿಯನ್ನು ತಮ್ಮನ ಮನೆಯಿಂದ ಮಧುವನ್ನು ತರುವಂತೆ ನಿಯಮಿಸಿದಳು. ಅದರೆ ನೀಚನಾದ 'ಆ ಕೀಚಕನ ಬಳಿಗೆ ಬೇರೆಯವರನ್ನು ಕಳುಹಿಸು' ಎಂದು ಬೇಡಿಕೊಂಡರೂ ಅದಕ್ಕೆ ಪುರಸ್ಕಾರ ಸಿಗಲಿಲ್ಲ. ನಿರ್ವಾಹವಿಲ್ಲದೆ ಅವಳು ಹೋಗುವಂತಹ ಪ್ರಸಂಗವೇ ಬಂದಿತು. ಲಾವಣ್ಯ ಸಾಗರದಲ್ಲಿ ಹುಟ್ಟಿದ ಆ ಸೌಂದರ್ಯವತಿಯನ್ನು ಕಂಡು ಕೀಚಕನು ಧನ್ಯನೆಂದುಕೊಂಡನು. ಮತ್ತು ಅವಳನ್ನು ಆದರದಿಂದ ಕರೆದನು. ಆಗ ಅವಳು ಕೋಪಗೊಂಡಾಗ 'ನಿನ್ನ ಬೈಗಳಿಂದ ನನಗೆ

ಸ್ತೋವಾಗದೆಂದು ಅವಳ ಕೈಯನ್ನು ಹಿಡಿದನು. ಆಗ ಅವಳು ಕೊಸರಿಕೊಂಡು ಓಡಿ ವಿರಾಟನ ಸಭೆಯನ್ನು ಸೇರಿಕೊಂಡಳು. ಆ ಕಾಮುಕನು ಅವಳನ್ನು ಬೆನ್ನಟ್ಟಿ ಬಂದು, ತುಂಬಿದ ಸಭೆಯನ್ನು ಲೆಕ್ಕಿಸದೇ, ಅವಾಚ್ಯವಾಗಿ ಬೈಯುತ್ತ, ಅವಳ ತುರುಬನ್ನು ಹಿಡಿದು ಅವಳನ್ನು ಕೆಳಕ್ಕೆ ಕೆಡವಿ ನೆಲಕ್ಕೆ ಮೆಟ್ಟಿದನು. ಅದರಿಂದ ಆ ಸುಕುಮಾರಿಗೆ ಬಾಯಿ ಮೂಗುಗಳಲ್ಲಿ ನೆತ್ತರ ಸುರಿಯಹತ್ತಿತು. ಪಾಪಿಗಿಳಾದ ನನ್ನ ಪತಿಗಳಿಗಾದರೂ ನನ್ನ ನಿಟ್ಟುಸುರು ತಾಗಬಾರದೆ ಎಂದು ಗೋಳಾಡಿದಳು.

ದ್ರೌಪದಿಯ ಈ ಗೋಳು, ಸಭೆಯಲ್ಲಿ ಕುಳಿತಿದ್ದ ಭೀಮಸೇನನನ್ನು ಕೆರಳಿಸಿತು. ಆಗ ಅವನ ಅಂತರಂಗವು ಕತ ಕತ ಕುದಿಯಿತು. ಔಡುಗಚ್ಚಿಕೊಂಡು ಸಭಾಂಗಣದ ಎದುರಿಗಿದ್ದ ದೊಡ್ಡ ಮರವನ್ನು ಕೆಕ್ಕರಿಸಿ ನೋಡಿದನು. ಈ ನೋಟದ ಹಿಂದಿದ್ದ ಮನೋಭಾವವನ್ನು ಅರ್ಥಮಾಡಿಕೊಂಡು ಧರ್ಮಜನು ಅಯ್ಯಾ, ವಲಲ! ಇದು ಸಜ್ಜನರಿಗೆ ಆಶ್ರಯವಾದ ಮರವಾದ್ದರಿಂದ ಇದನ್ನು ಮುರಿಯಬೇಡವೆಂದನು. ನಿನ್ನ ಅಡುಗೆಗೆ ಬೇಕಾಗಿದ್ದರೆ ಊರ ಹೊರಗಿನ ಮರವನ್ನು ಉಪಯೋಗಿಸಿಕೋ ಎಂದನು. ಅಣ್ಣನ ಸಮಾಧಾನದ ಮಾತುಗಳು ಭೀಮಸೇನನಿಗೆ ಹಿಡಿಸಲಿಲ್ಲವಾದ್ದರಿಂದ ಎದ್ದು ಹೋದನು. ಆಗ ಕಂಕಭಟ್ಟನು ಸೈರಂಧ್ರಿಯ ಕಡೆಗೆ ತಿರುಗಿ 'ಇದು ನಿನ್ನ ಪೂರ್ವಾರ್ಜಿತ ಕರ್ಮ. ಕೀಚಕನನ್ನು ಶಿಕ್ಷಿಸುವ ಶಕ್ತಿ ಈ ಸಭೆಗೆ ಇಲ್ಲವೆಂದನು. ಈತ ಮಹಾರಾಜನಿಗೂ ಹೆದರುವವನಲ್ಲ, ಆದ್ದರಿಂದ ನೀನು ಮೌನವಾಗಿ ಮನೆಗೆ ಹಿಂದಿರುಗು ಎಂದನು.

ಕಂಕಭಟ್ಟನ ಮಾತು ಕೇಳಿ ಸೈರಂಧ್ರಿಗೆ ಕಸಿವಿಸಿಯಾಯಿತು. ವಾಯುಪುತ್ರನನ್ನು ಶರಣುಹೋಗಬೇಕೆಂದು ನಿಶ್ಚಯಿಸಿ ಆಕೆ ಅಲ್ಲಿಂದ ಹೊರಟು ಹೋದಳು. ರಾಜ ಸಭೆಯಿಂದ ಹೊರಟ ದ್ರೌಪದಿಯು ನೇರವಾಗಿ ಸುದೇಷ್ಣೆಯ ಬಳಿಗೆ ಬಂದಾಗ, ಅವಳು ಏನೂ ಅರಿಯದಂತೆ 'ಇದೇಕಮ್ಮ' ನಿನ್ನ ಮುಖ ಹೀಗೇಕೆ ಬಾಡಿದೆ ?' ಎಂದಳು. ಅದಕ್ಕೆ ದ್ರೌಪದಿಯು ನೀವು ಮಾಡಿದುದು ನಿಮಗೆ ಜ್ಞಾಪಕವಿಲ್ಲವೇ ? ಎಂದಳು. ಇಷ್ಟು ನುಡಿದು ದ್ರೌಪದಿಯು ಮನೆಗೆ ಹಿಂದುರಿಗಿ ಒಳಗೊಳಗೆ ಕುದಿದಳು. ಕೊನೆಗೆ ಏನಿ

6

ದ್ದರೂ ಭೀಮಸೇನನನೆ ಇದಕ್ಕೆ ಸಮರ್ಥನೆಂದುಕೊಂಡು, ಭೀಮಸೇನನ್ನು ಅರಸುತ್ತ ಪಾಕಶಾಲೆಗೆ ಬಂದಳು. ಆಗ ಅಲ್ಲಿ ಭೀಮಸೇನನು ಮಲಗಿದ್ದನು. ಪುಣ್ಯಕ್ಕೆ ಅವನು ತತ್ ಕ್ಷಣಕ್ಕೆ ಎಚ್ಚತ್ತು, ಅವಳ ದುಖಃವನ್ನು ಕೇಳಿ ಕೊಂಡನು. ಅದಕ್ಕೆ ಅವನು 'ದ್ರೌಪದಿ, ನಿನಗೆ ನಾನೊಬ್ಬನೇ ಗಂಡನಲ್ಲ, ಇನ್ನೂ ನಾಲ್ವರಿದ್ದಾರೆ, ಅವರಲ್ಲಿ ಹೋಗಿ ನೀನು ನಿನ್ನ ದುಖಃವನ್ನು ತೋಡಿಕೊ. ಇಂದು ನಾನು ಅಣ್ಣನ ಆಜ್ಞೆಯೆಂಬ ಕಣ್ಣಿಗೆ ಸಿಕ್ಕುಬಿದ್ದಿದ್ದೇನೆ. ಇನ್ನು ಮೇಲೆ ನನ್ನನ್ನು ಮರೆತು ನಾಲ್ವರೇ ನಿನಗೆ ಗಂಡಂದಿರೆಂದು ತಿಳಿದುಕೋ' ಎಂದನು. ಭೀಮಸೇನನ ಈ ಮಾತನ್ನು ಕೇಳುತ್ತಿದ್ದಂತೆ ಅವಳಿಗೆ ಬಹಳ ದುಖಃವಾಯಿತು. ಮತ್ತು ಅವಳು ಭೀಮನಲ್ಲಿ ಪರಿ ಪರಿ ಯಾಗಿ ಹಲುಬಿ ಕಟ್ಟಕಡೆಗೆ 'ಬಲಭೀಮನೇ, ನೀನು ನನಗೆ ಸಾಯಲು ಅಪ್ಪಣೆಯನ್ನು ಕೊಟ್ಟಯಷ್ಟೇ ಆಯಿತು. ಆದರೆ ನೀನು ಅಣ್ಣನ ಆಜ್ಞೆಗೆ ವಿರುದ್ಧ ಹೋಗಬೇಡ: ಬಹಳವಾಗಿ ಮತ್ತು ಕಟುವಾಗಿ ನುಡಿದುದಕ್ಕೆ ಕ್ಷಮಿಸಬೇಕು'. ಎಂದು ದ್ರೌಪದಿಯು ನುಡಿದಾಗ ಭೀಮಸೇನನಿಗೆ ಅವಳ ದೀನಾವಸ್ಥೆಯನ್ನು ಕಂಡು ಕಣ್ಣೀರು ಬಂದವು. ಅವಳ ದುಃಖವನ್ನು ಸಂತೈಸಿ 'ಎಲೈ ಸುಂದರೀ ಚಿಂತಿಸಬೇಡ, ಇನ್ನು ನಿನ್ನ ರಕ್ಷಣೆಯ ಹೊಣೆ ನನ್ನದು. ಆದರೆ ನೀನು ಒಂದು ಕೆಲಸವನ್ನು ಮಾಡು; ನಾಟ್ಯ ಮಂಟಪ ವನ್ನು ಸಂಕೇತ ಸ್ಥಾನವಾಗಿಸಿ ಆನಾಯಿಯನ್ನು ಅಲ್ಲಿಗೆ ಕರೆಯಿಸು ಎಂದನು'

ನಿತ್ಯದಂತೆ ಆ ದಿನವು ಕೀಚಕನು ಅರಮನೆಗೆ ಹೊರಟವನು ದಾರಿ ಯಲ್ಲಿ ವೃಕೋದರ ವಲ್ಲಭೆಯನ್ನು ಕಂಡನು. ಅವಳನ್ನು ಕುರಿತು ಅವನು 'ಸುಂದರಿ, ನಿನ್ನೆಯ ರಾತ್ರಿಯಲ್ಲ ಒಂದು ಯುಗವಾದಂತಾಯಿತು. ಮನ್ಮಥನು ನನ್ನ ಪಾಲಿಗೆ ಯಮನಾಗಿ ಬಿಟ್ಟಿದ್ದಾನೆ ಕಾಪಾಡು'. ಎಂದಾಗ ಅವಳು 'ಇಂದು ಸಂಜೆ ಯಾರಿಗೂ ಗೊತ್ತಾಗದಂತೆ ನೀನು ನಾಟ್ಯಶಾಲೆಗೆ ಬಾ, ನಾನು ಕತ್ತಲೆಯಲ್ಲಿ ಮೈ ಮರೆಸಿಕೊಂಡು ಬರುತ್ತೇನೆ ಎಂದಳು. ಆಗ ಅವನಿಗೆ ಬಹಳ ಆನಂದವಾಯಿತು.

ಇತ್ತ ಕೀಚಕನು ಸಂಜೆಯಾಗುತ್ತಲೇ ದಿವ್ಯವಾದ ವಸ್ತ್ರಗಳನ್ನು ಧರಿಸಿ, ಅಲಂಕಾರ ಮಾಡಿಕೊಂಡು, ನಾಟ್ಯ ಗೃಹವನ್ನು ಪ್ರವೇಶಿಸಿ ಅಲ್ಲಿ ಮಲಗಿದ್ದ ಭೀಮನ ಮೈಯನ್ನು ಲಂಪಟತನದಿಂದ ಸವರಿದನು. ನಿನ್ನ

ನಿನ್ನ ಮೈಯು ಎಷ್ಟು ಕರ್ಕಶವಾಗಿದೆಯಲ್ಲಾ' ಎಂದನು. 'ಪರಸತಿಯನ್ನು ನೋಡಿದರೆ ಹೀಗೇ ಆಗುವದು' ಎನ್ನುತ್ತ ಅವನ ಜುಟ್ಟವನ್ನು ಹಿಡಿದು ಬಗ್ಗಿಸಿದನು. ಇಷ್ಟಾಗುವದರೊಳಗೆ ಅಲ್ಲಿರುವವಳು ಹೆಣ್ಣಲ್ಲವೆಂದು ಅರ್ಥವಾಯಿತು. ಭೀಮಸೇನನ ಹೊಡೆತಗಳಿಗೆ ಕೀಚಕನು ತತ್ತರಿಸಿ ಹೋದನು. ಅವನು ಕೀಚಕನನ್ನು ಒಮ್ಮೆ ತಿವಿದಾಗ ಅವನ ಎದೆ ಜರ್ಝರಿತವಾಯಿತು; ಕರುಳುಗಳನ್ನು ಕಾರಿ ಕೆಳಗೆ ಬಿದ್ದನು. ಕ್ಷಣಮಾತ್ರದಲ್ಲಿ ಅವನ ಪ್ರಾಣ ಹಾರಿ ಹೋಯಿತು. ಭೀಮಸೇನನು ಸತ್ತವನ ತಲೆಯನ್ನು ಎದೆಯೊಳಕ್ಕೆ ಒತ್ತಿ, ಕಾಲುಗಳನ್ನು ಹೊಟ್ಟೆಯೊಳಕ್ಕೆ ತುರುಕಿದನು. ಈ ರೀತಿಯಾಗಿ ಕುಮಾರವ್ಯಾಸನು ವಿರಾಟಪರ್ವದೊಳಗೆ ಕೀಚಕನ ಸಂಹಾರವನ್ನು ಮತ್ತು ಅದರ ಹಿನ್ನಲೆಯನ್ನು ಉತ್ತಮವಾಗಿ ಚಿತ್ರಿಸಿದ್ದಾನೆ.

ಪ್ರಶ್ನೆ— ವಿರಾಟ ಪರ್ವದಲ್ಲಿ ವ್ಯಕ್ತವಾದ ಉತ್ತರನ ಪೌರುಷದ ಮಾತುಗಳನ್ನು ಸಂಗ್ರಹಿಸಿ ಬರೆಯಿರಿ.

ಅಥವಾ

ಉತ್ತರಕುಮಾರನ ಪೌರುಷದ ಮಾತುಗಳನ್ನು ಸಂಗ್ರಹಿಸಿರಿ.

ಉತ್ತರ— ಮಹಾಭಾರತದ ತಿರುಳೆಂದರೆ ವಿರಾಟಪರ್ವ, ಇದರಲ್ಲಿ ಕನ್ನಡ ಶ್ರೇಷ್ಠ ಕವಿಯೆನಿಸಿಕೊಂಡ ಕುಮಾರವ್ಯಾಸನು ಉತ್ತಮ ಸಂಗ್ರಹಕಾರನೆನಿಸಿದ್ದಾನೆ. ಇದರಲ್ಲಿ ಪಾಂಡವರು ವಿರಾಟನ ಸೇವಾವೃತ್ತಿಗೆ ನಿಂತದ್ದು, ಕೀಚಕನು ದ್ರೌಪದಿಯನ್ನು ಕಾಮಿಸಿ ಹತನಾದದ್ದು, ಉತ್ತರ ಗೋಗ್ರಹಣ ಪ್ರಸಂಗದಲ್ಲಿ ಉತ್ತರನ ಪೌರುಷ, ಪಾಂಡವರ ಗೆಲವು ಮುಂತಾದವುಗಳು ಇದರಲ್ಲಿ ಚಿತ್ರಿತವಾಗಿವೆ. ಇವೆಲ್ಲವುಗಳಲ್ಲಿ ಹೆಚ್ಚಾಗಿ ಉತ್ತರ ಗೋಗ್ರಹಣ ಪ್ರಸಂಗದಲ್ಲಿ ವಿರಾಟನ ಕುಮಾರನಾದ ಉತ್ತರನನ್ನು ಕವಿ ಕುಮಾರವ್ಯಾಸನು ಹಾಸ್ಯಾಸ್ಪದ ವ್ಯಕ್ತಿಯನ್ನಾಗಿ ಮಾಡಿ ಹಾಸ್ಯದ ಹೊಳೆಯನ್ನು ಹರಿಸಿ ಜನ ಮೆಚ್ಚಿಗೆಯನ್ನು ಗಳಿಸಿಕೊಂಡಿದ್ದಾನೆ.

ಚಾರರು ಬಂದು ಉತ್ತರಕುಮಾರನಿಗೆ ಕೌರವರು ತುರುಗಳನ್ನು ಸೆರೆ ಹಿಡಿದಿದ್ದಾರೆಯೆಂಬ ವಿಷಯವನ್ನು ಹೇಳಿದರು. ಆಗ ಅವನು ತನ್ನ

ಮೀಸೆಯನ್ನು ಹುರಿಗೊಳಿಸುತ್ತ, ಕೆಳದಿಯರ ಮೊಗವನ್ನು ನೋಡಿ, ವೀರಾವೇಶ ಬಂದಂತವನಾಗಿ "ಯುದ್ಧ ಬೆದರಿಕೆಯಿಂದ ಬಡಬಡಿಸುತ್ತಿರುವ ಈ ಕುನ್ನಿಗಳನ್ನು ನೂಕೋ ಅತ್ತ, ನಾನು ಕೋಪಗೊಂಡು ಯುದ್ಧಕ್ಕೆ ನಿಂತರೆ ದೇವತೆಗಳು ನಡುಗಿಹೋಗುತ್ತಾರೆ, ಈ ಕೌರವ ಕುನ್ನಿಗಳು ನನಗೆ ಲೆಕ್ಕವೆ?' ಎಂದನು. ಆಗ ಸೇವಕರು ತಮ್ಮ ಕೈಗುಣವನ್ನು ಶತ್ರುಗಳಿಗೆ ತೋರಿಸಿ ನಮ್ಮನ್ನು ಉದ್ಧರಿಸಬೇಕು ಎಂದಾಗ, ಅವನು ಅದನ್ನು ಸತ್ಯವೆಂದು ನಂಬಿ ಆನಂದಪಟ್ಟು ಮೀಸೆಯನ್ನು ಹುರಿಮಾಡಿದನು. ಮತ್ತೆ ಸುತ್ತಲು ಕುಳಿತ ಹೆಂಗಳೆಯರನ್ನು ನೋಡಿ 'ಸೋದರ ರಾಜ್ಯವನ್ನು ಅಪಹರಿಸಿ ಅವರ ಹೆಂಡತಿಯನ್ನು ಪರಾಭವಗೊಳಿಸಿ ಆ ಪಂಚಪಾಂಡವರನ್ನು ಅಡವಿಗೆ ಅಟ್ಟಿದ ಮಾತ್ರದಿಂದ ಅಜೇಯನೆಂದು ಭಾವಿಸಿದನೋ ಆ ಕೌರವ ? ನನ್ನನೇನು ಆ ಯುಧಿಷ್ಠಿರನೆಂದು ತಿಳಿದನೋ ? ಒಂದು ವೇಳೆ ನನಗೆ ಕೋಪ ಬಂದರೆ ಅವನ ಕೀರ್ತಿಯನ್ನು ಅಳಿಸಿ ಬಿಡುವೆನು, ಇದು ಅವನಿಗೆ ಗೊತ್ತಿಲ್ಲ. ಯಮನ ಮೀಸೆಯನ್ನು ಎಳೆದು ತಮಾಷೆ ಮಾಡ ಹೊರಟನೋ ? ಮೃತ್ಯುವಿನ ಮೈಮೇಲಿನ ಬಟ್ಟೆಯನ್ನು ಎಳೆದು ಕೆರಳಿಸುವಂತೆ ನನ್ನ ಮೇಲೆ ಏರಿಬಂದಿದ್ದಾನೆ. ಅವನಿಗೆ ಎಲ್ಲೋ ಹುಚ್ಚು ಹಿಡಿದಿರಬೇಕು. ಎಂದು ಕೂಗಾಡಿದನು. ಕೌರವನ ಸೈನ್ಯದಲ್ಲಿ ತನಗೆ ಯಾರೂ ಸಮಾನರಿಲ್ಲವೆಂದು ಅವನ ಭಾವನೆಯಾಗಿದೆ.

ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲವರಂತಕನ ನೆರೆ
ಯೂರವರು ಕೆಲವರಧಮ ಕುಲದಲಿ ಸಂದು ಬಂದವರು.
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟರೊಳೆಂದು ಕು
ಮಾರ ನೆಣಗೊಬಿನ ನುಡಿದನು ಹೆಂಗಳಿಳಿದಿರನಲಿ.

ಉತ್ತರಕುಮಾರನು ಯಾರೊಡನೆ ಯುದ್ಧ ಮಾಡಲಿ ? ಎನ್ನುತ್ತಾನೆ. ಕೆಲವರು ಹಾರವರು; ಕೆಲವರು ಯಮನ ನೆರೆಯೂರವರು; ಮತ್ತೆ

ಕೆಲವರು ಅಧಮ ಕುಲದಲ್ಲಿ ಹುಟ್ಟಿದವರು; ಇವರ ಜೊತೆಗೆ ಯುದ್ಧ ಮಾಡುವದುಂಟೆ ಎನ್ನುತ್ತಿದ್ದಾನೆ.

ಇಷ್ಟೇ ಅಲ್ಲ ಕೌರವರಾಯನು ಅಧರ್ಮ ಕಾರ್ಯ ಮಾಡಿ ಶಾಸ್ವತವಾಗಿ ಅಪಕೀರ್ತಿಗೆ ಭಾಜನನಾದನು. ಆ ನೀಚನನ್ನು ಸಂಹರಿಸಿ ಹಸ್ತಿನಾಪುರದಲ್ಲಿ ನಮ್ಮ ರಾಣಿಯನ್ನು ಇಡುವೆನು. ಅವನ ಸೈನ್ಯವನ್ನು ಧೂಳಿಪಟವನ್ನು ಮಾಡಿ ಜಯಾಂಗನೆಯನ್ನು ತರುವೆನು, ಈಗ ಮಾತನಾಡಿ ಏನು ಪ್ರಯೋಜನ ? ಅನ್ಯಾಯವಾಗಿ ನನಗೆ ಸಾರಥಿಯಾಗಬಲ್ಲವನು ನಿನ್ನಿನ ಯುದ್ಧದಲ್ಲಿ ಸತ್ತುಹೋದ. ಈಗ ನನ್ನ ಮನಸ್ಸಿಗೆ ಹೊಂದಿಕೊಳ್ಳುವಂತಹ ಸಾರಥಿಯೊಬ್ಬನು ದೊರೆತರೆ ಕೌರವರಾಯರ ಸೈನ್ಯಕ್ಕೆ ಹಬ್ಬವನ್ನು ಮಾಡುತ್ತೇನೆ ಎಂದನು.

ಹೀಗೆ ಉತ್ತರಕುಮಾರನು ತಡೆಯಿಲ್ಲದೆ ಬಾಯಿಗೆಬಂದಂತೆ ಹರಟುತ್ತಿದುದನ್ನು ಕೇಳಿ ಅರ್ಜುನನಿಗೆ ಸ್ವಲ್ಪ ಕೋಪ ಬಂದಿತು. ಆಗ ಅವನು ದ್ರೌಪದಿಯನ್ನು ಕಾಂತದಲ್ಲಿ ಕರೆದು ತನ್ನನ್ನು ಅರ್ಜುನನ ಸಾರಥಿಯೆಂಬುದನ್ನು ಉತ್ತರೆಗೆ ತಿಳಿಸು ಎಂದು ಹೇಳಿದನು. ಅದರಂತೆಯೇ ಆಕೆ ಉತ್ತರೆಯ ಬಳಿ ಬಂದು ಈ ವಿಷಯವನ್ನು ಹೇಳಲು ಅವಳು ಬಂದು ಅಣ್ಣನಿಗೆ ತಿಳಿಸಿದಳು. ಅವನು ಅದಕ್ಕೆ ಒಪ್ಪಲು, ಉತ್ತರೆಯೇ ಸ್ವತಃ ಹೋಗಿ ಬೃಹನ್ನಳೆಯನ್ನು ಒಪ್ಪಿಸಿ ಆ ಸ್ಥಾನಕ್ಕೆ ಕರೆತಂದಳು. ಆಗ ಅರ್ಜುನನು ಭೀಷ್ಮಾದಿಗಳ ಜೊತೆಗೆ ಯುದ್ಧವೆಂದರೆ ಸಾಮಾನ್ಯವಲ್ಲವೆಂದು ಹೇಳಲು, ಅದಕ್ಕೆ ಉತ್ತರಕುಮಾರನು "ಅಯ್ಯೊ ನಾನಿರುವಾಗ ಭೀಷ್ಮಾದಿಗಳು ನಿನಗೆ ಏನು ಮಾಡುವರು? ನೀನು ಸ್ವಲ್ಪೂ ಅಳುಕಬೇಡ ಕ್ಷಣಮಾತ್ರದಲ್ಲಿ ಅವರನ್ನು ಸಂಹರಿಸುತ್ತೇನೆ. ನಾನು ಯಾರೆಂಬುದು ನಿನಗೆ ಗೊತ್ತಿಲ್ಲ. ದ್ರೋಣ, ಕರ್ಣ, ಅಶ್ವತ್ಥಾಮ ಇತ್ಯಾದಿಗಳೆಲ್ಲರನ್ನೂ ನಾನು ಬಲ್ಲೆ. ನೀನು ನಿರ್ಯೋಚನೆಯಿಂದ ನನಗೆ ಸಾರಥಿಯಾಗು ಎಂದು ಉತ್ತರ ಪೌರುಷದ ಮಾತುಗಳನ್ನಾಡಿದನು.

ಈ ರೀತಿಯಾಗಿ ಕುಮಾರ ವ್ಯಾಸನು ತನ್ನ ವಿರಾಟ ಪರ್ವದಲ್ಲಿ ಮಹಾಭಾರತದ ಕಥೆಯೊಂದಿಗೆ ಉತ್ತರನ ಹಾಸ್ಯ ಪ್ರಧಾನದವಾದ ಪಾತ್ರವನ್ನು

ಚಿತ್ರಿಸಿ ಓದುಗರ ಹೃದಯವನ್ನು ಸಂತೋಷಗೊಳಿಸಿ ಹಾಸ್ಯರಸವನ್ನು ಹೊಳೆಯಾಗಿ ಹರಿಸಿದ್ದಾನೆ. ಎಂದು ಹೇಳಬಹುದು.

ಪ್ರಶ್ನೆ:-ಅಜ್ಞಾತ ವಾಸದಲ್ಲಿದ್ದ ಪಾಂಡವರು ವಿರಾಟರಾಜನ ಆಸ್ಥಾನದಲ್ಲಿ ಹೇಗೆ ಆಶ್ರಯವನ್ನು ಪಡೆದರು ? ವಿವರಿಸಿರಿ.

ಅಥವಾ

ಪಾಂಡವರು ಅಜ್ಞಾತವಾಸದಲ್ಲಿ ವಿರಾಟರಾಯನಲ್ಲಿ ಆಶ್ರಯವನ್ನು ಪಡೆದ ಬಗೆ ಹೇಗೆ ? ವಿವರಿಸಿರಿ.

ಉತ್ತರ:-ಹನ್ನೆರಡು ವರ್ಷದ ವನವಾಸ ಉರುಳಿ ಹೋಗಿತ್ತು. ಇನ್ನು ಅಜ್ಞಾತವಾಸದ ಒಂದು ವರ್ಷ ಸವೆಯಬೇಕಾಗಿತ್ತು. ಅದಕ್ಕೆ ತಕ್ಕ ಸ್ಥಳ ಯಾವದು ? ಎಂದು ಪಾಂಡವರು ಹುಡುಕುತ್ತಿದ್ದರು. ಬಡಗಣದಿಕ್ಕೆಲ್ಲವೂ ಕೌರವರ ಸಾಮ್ರಾಜ್ಯವಾಗಿತ್ತು. ಅಲ್ಲಿ ಮೈಮರೆಸಿಕೊಳ್ಳುವದು ಕಷ್ಟ. ಮೂಡಣ ಅರಸರು ಕೌರವರ ಗೆಳೆಯರು; ತೆಂಕದಿಕ್ಕಿನಲ್ಲಿಯ ಅರಸರೆಲ್ಲರೂ ಪಾಂಡವರಿಗೆ ಚಿರಪರಿಚಿತರಾದರೂ ಅವರ ಅಕ್ಕಪಕ್ಕದಲ್ಲಿರುವವರೆಲ್ಲರೂ ಚಾಡಿಕೋರರು, ಅವರ ಮಧ್ಯದಲ್ಲಿ ಗುಟ್ಟಾಗಿ ಬಾಳುವದು ಕಷ್ಟವಾಗಿತ್ತು. ಪಡುವಣದೊರೆಗಳು ತುಂಬ ಅಶಕ್ತರು, ಅಡಗಿಕೊಂಡಿರುವದಕ್ಕೆ ಅದೂ ತಕ್ಕ ಸ್ಥಳವಲ್ಲ, ಹೀಗಾಗಿ ತಲೆ ಮರೆಸಿಕೊಂಡಿರಲು ಧರ್ಮರಾಯನಿಗೆ ತಕ್ಕ ಸ್ಥಳವೇ ತೋಚಲೊಲ್ಲದಾಗಿತ್ತು. ಅದಕ್ಕಾಗಿ ಅವನು ತಮ್ಮಂದಿರಲ್ಲಿ ಈ ವಿಚಾರವನ್ನು ಪ್ರಾಸ್ತಾಪಿಸಿದನು. ಆಗ ಅರ್ಜುನನು ಪಡುವಣದಿಕ್ಕಿನ ಅರಸರು ಅಶಕ್ತರಾದರೂ ಸಹ ಅದೇ ತಮಗೆ ಶ್ರೇಯಸ್ಕರವಾದ ಸ್ಥಳವೆಂದು ಸೂಚಿಸಿದನು. ವಿರಾಟರಾಯನ ಆಸ್ಥಾನದಲ್ಲಿ ಕೀಚಕನು ಇರುವದರಿಂದ ಕೌರವರ ಆಟವು ಅಲ್ಲಿ ನಡೆಯುವಂತಿಲ್ಲ. ಆದ್ದರಿಂದ ಪಂಚಪಾಂಡವರು ತಮ್ಮ ಅಜ್ಞಾತವಾಸವನ್ನು ಅಲ್ಲಿ ನಿರ್ಭಯವಾಗಿ ಕಳೆಯಬಹುದು ಎಂಬ ಅರ್ಜುನನ ಈ ಸೂಚನೆ ಎಲ್ಲರಿಗೂ ಒಪ್ಪಿಗೆಯಾಯಿತು. ವೇಷವನ್ನು ಬದಲಿಸಿಕೊಂಡು ಒಬ್ಬಬ್ಬರಾಗಿ ವಿರಾಟ ನಗರವನ್ನು ಪ್ರವೇಶಿಸಬೇಕೆಂದು ನಿಶ್ಚಯಿಸಿಕೊಂಡರು. ತಮ್ಮ ಆಯುಧಗಳನ್ನೆಲ್ಲಾ ಒಂದು ಚರ್ಮದಲ್ಲಿ ಹೆಣದಾಕಾರದಲ್ಲಿ ಬಿಗಿದು ಬನ್ನಿಯ ಗಿಡದ ಮೇಲೆ ಬಿಚ್ಚಿಟ್ಟರು.

ಮೊದಲಿಗೆ ಧರ್ಮರಾಜನು ಯತಿವೇಷದಲ್ಲಿ ವಿರಾಟರಾಯನ ಪಟ್ಟಣವನ್ನು ಪ್ರವೇಶಿಸಿದನು. ಆತನ ತೇಜಃಪುಂಜ ಮೂರ್ತಿಯನ್ನು ಕಂಡು ಬೀದಿಯ ಜನರು ಕೈಮುಗಿದರು. ಆತನ ಆಗಮನವನ್ನು ಆದರದಿಂದ ವಿರಾಟರಾಜನು ಇದಿರುಗೊಂಡು ಸಕಲ ಮರ್ಯಾದೆಯಿಂದ ಅವನನ್ನು ಮನೆಗೆ ಕರೆದುಕೊಂಡು ಹೋದನು. ಅಲ್ಲಿ ತಾನು ಯತಿವೇಷಧಾರಿಯು ಪಾಂಡವರ ಬಳಿಯಲ್ಲಿ ಇದ್ದುದಾಗಿಯೂ, ಅವರು ವನವಾಸಕ್ಕೆ ಹೋದುದರಿಂದ ಹೊಟ್ಟೆಯ ಸಲುವಾಗಿ ಆಶ್ರಯ ಹುಡುಕುತ್ತ ಬಂದಿದ್ದೇನೆ. ನನ್ನ ಹೆಸರು ಕಂಕನೆಂಬುದಾಗಿ ಹೇಳಿಕೊಂಡನು. ರಾಜನು ಅದನ್ನು ನಂಬಿ ಅವನಿಗೆ ಆಶ್ರಯವನ್ನು ಕೊಟ್ಟನು.

ಇದಾದ ಒಂದೆರಡು ದಿವಸದ ನೇಲೆ ಭೀಮಸೇನನು ವಲಲನೆಂಬ ಹೆಸರಿನಿಂದ ಪ್ರವೇಶ ಮಾಡಿ ರಾಜನನ್ನು ಕಾಣಿಸಿಕೊಂಡನು. 'ನಾನು ಪಾಕಶಾಸ್ತ್ರದಲ್ಲಿ ಪ್ರವೀಣ; ನನಗೆ ಮಲ್ಲವಿದ್ಯೆಯೂ ಪರಿಚಯವಿದೆ; ನಾನು ಭೀಮನ ಬಳಿಯಲ್ಲಿ ಬಾಣಸಿಗನಾಗಿದ್ದೆ ಎಂದು ಹೇಳಿ ವಿರಾಟರಾಯನ ಪಾಕಶಾಲೆಯನ್ನು ಪ್ರವೇಶಿಸಿದನು. ಅರ್ಜುನನು ಹಿಂದೆ ಊರ್ವಶಿಯು ತನಗೆ ಕೊಟ್ಟ ಶಾಪದಿಂದ ಈಗ ಬೃಹನ್ನಳೆಯೆಂಬ ಹೆಸರಿನಿಂದ ರಾಣಿವಾಸದಲ್ಲಿ ನಾಟ್ಯವಿದ್ಯಾಗುರುವಾದನು. ನಕುಲ, ಸಹದೇವರು ಕುದುರೆ ಮತ್ತು ದನಕಾಯುವವರಾದರು. ಕಡೆಗೆ ಪಂಚಪಾಂಡವರ ರಾಣಿಯಾದ ದ್ರೌಪದಿಯು ಸೈರಂಧ್ರಿಯ ವೇಷದಿಂದ ಪುರಪ್ರವೇಶಮಾಡಿ ವಿರಾಟರಾಯನ ರಾಣಿಯಾದ ಸುದೇಷ್ಣೆಯ ಆಶ್ರಯವನ್ನು ಪಡೆದಳು. ಈ ರೀತಿಯಾಗಿ ಪಂಚಪಾಂಡವರು ಮತ್ತು ಅವರ ರಾಣಿಯು ವಿರಾಟರಾಯನ ಆಸ್ಥಾನದಲ್ಲಿ ತಮ್ಮ ಒಂದು ವರ್ಷದ ಅಜ್ಞಾತವಾಸವನ್ನು ಕಳೆದರು.

ಪ್ರಶ್ನೆ:—ಕೌರವರ ದಕ್ಷಿಣ ಗೋಗ್ರಹಣ ಪ್ರಸಂಗವನ್ನು ಕುರಿತು ಚರ್ಚಿಸಿರಿ.

ಉತ್ತರ:—ಕೀಚಕನ ಮರಣದ ವೃತ್ತಾಂತ ದೇಶದಲ್ಲಿ ಜನಜನಿತವಾಯಿತು. ಅಜ್ಞಾತವಾಸದಲ್ಲಿದ್ದ ಪಾಂಡವರ ಅನ್ವೇಷಣೆಗೆಂದು ಅಟ್ಟಿದ್ದ ಗೂಢಚಾರರಿಗೂ ಈ ಸುದ್ದಿ ಗೊತ್ತಾಯಿತು. ದೇಶ ದೇಶಗಳನ್ನು ತೊಳಲಿ ಹಸ್ತಿನಾನತಿಗೆ ಹಿಂದಿರುಗಿದ ಅವರು ತಮ್ಮ ಪ್ರಭುಗಳಲ್ಲಿ ಕೀಚಕನು ಮತ್ತು

ಅವನ ಸಹೋದರರರು ನಾಶವಾದ ವಿಚಾರವನ್ನು ಮತ್ತು ಕುಪಿತರಾದ ಗಂಧರ್ವರು ಒಂದಿರುಳಿನಲ್ಲಿ ಅವರೆಲ್ಲರನ್ನೂ ಸಂಹರಿಸಿದರು. ಎಂಬ ಜನ ಜನಿತವಾದ ವಿಚಾರವನ್ನು ವಿವರವಾಗಿ ನಿವೇದಿಸಿದರು.

ಗೂಢಚಾರರ ಮಾತುಗಳನ್ನು ಕೇಳಿ ಕೌರವನು ಬೆರಗಾದನು. ಗಂಧರ್ವರ ಪತ್ನಿಯೆಂದರೆ ದ್ರೌಪದಿಯೇ ಇರಬೇಕು. ಎಂದು ಆತನು ತರ್ಕಿಸಿದನು. ಇದನ್ನು ಮಂತ್ರಿಗಳೂ ಒಪ್ಪಿದರು. ಅವರೊಡನೆ ಸಮಾಲೋಚನೆ ಮಾಡಿದ ದುರ್ಯೋಧನನು ವಿರಾಟನ ಪಟ್ಟಣಕ್ಕೆ ಮುತ್ತಿಗೆ ಹಾಕಿ ಆತನ ಗೋವುಗಳನ್ನೆಲ್ಲಾ ಸೆರೆ ಹಿಡಿಯಬೇಕೆಂದೂ, ಧರ್ಮದ ಮೇರೆಗೆ ಮರ್ಯಾದೆಯನ್ನು ಅರಿತ ಪಾಂಡವರು ಅವುಗಳನ್ನು ಬಿಡಿಸಲಿಕ್ಕೆ ಬರುವರೆಂದೂ, ಆಗ ಅವರನ್ನು ಗುರುತಿಸಿ ಮತ್ತೆ ಹದಿಮೂರು ವರ್ಷ ವನವಾಸಕ್ಕೆ ಅಟ್ಟಬಹುದೆಂದು ನಿಶ್ಚಯಿಸಿದನು. ಅವಧಿಯು ಪೂರೈಸುತ್ತ ಬಂದದ್ದರಿಂದ ಒಡನೆಯೇ ಸೈನ್ಯವನ್ನು ವಿರಾಟ ನಗರಿಗೆ ಹೊರಡುವಂತೆ ಅಪ್ಪಣೆ ಮಾಡಿದನು.

ವಿರಾಟ ನಗರವನ್ನು ಮುತ್ತಲು ಹೊರಟ ಕೌರವರ ಸೈನ್ಯವು ಎರಡು ವಿಭಾಗವಾಯಿತು. ಒಂದು ಗುಂಪಿಗೆ ಸ್ವತಃ ಕೌರವನೇಅಧಿಪತಿಯಾದನು. ಇನ್ನೊಂದಕ್ಕೆ ಸುಶರ್ಮನು ಅಧಿಪತಿಯಾದನು. ಸುಶರ್ಮನು ದಾಳಿಮಾಡಿ ದಕ್ಷಿಣ ದಿಕ್ಕಿನ ಗೋವುಗಳನ್ನೆಲ್ಲಾ ಸೇರೆ ಹಿಡಿದನು; ಇದನ್ನು ಪ್ರತಿಭಟಿಸಿದ ಗೋಪಾಲಕರನ್ನೆಲ್ಲಾ ಸೈನಿಕರು ಕತ್ತರಿಸಿ ಹಾಕಿದರು. ಅಳಿದುಳಿದವರು ಓಡಿ ಹೋಗಿ ವಿರಾಟನಿಗೆ ಈ ಸುದ್ದಿಯನ್ನು ತಿಳಿಸಿದರು. ಇದನ್ನು ಕೇಳಿ ಆತ ಮನಸ್ಸಿನಲ್ಲಿಯೇ ಮಿಡುಕಿಕೊಂಡ; ಕೀಚಕನ ಮರಣದಿಂದ ಆತನ ಬಲಘೋಳೆ ಬಿದ್ದುಹೋದಂತಾಗಿತ್ತು. ಆದರೆ ಅವನು ಕ್ಷತ್ರಿಯ ಧರ್ಮವನ್ನು ಕೈಕೊಳ್ಳದೆ ಬೇರೆ ಉಪಾಯವೇ ಇರಲಿಲ್ಲ. ಆದುದರಿಂದ ರಾಜ್ಯದ ರಕ್ಷಣೆಗಾಗಿ ಉತ್ತರಕುಮಾರನನ್ನು ನೇಮಿಸಿ, ಸುಶರ್ಮನಿಗೆ ಇದಿರಾಗಿ ನಡೆದನು. ದಂಡೆತ್ತಿ ಬಂದಿದ್ದ ಕೌರವರ ಗುರಿ, ಪಾಂಡವರಿಗೆ ಗೊತ್ತಾಗಿತ್ತು. ಆದರೂ ಸಹ ತುರುಹುಯ್ಯಲವನ್ನು ಕೇಳಿ ಧರ್ಮರಾಯನು ಜಲಪ್ರಾಶನ ಮಾಡುವಂತಿರಲಿಲ್ಲ. ಇಷ್ಟಾಗುವ ವೇಳೆಗೆ ಅಜ್ಞಾತ ವಾಸದ ಅವಧಿ

ಪೂರೈಸಿ ಹೋಗಿತ್ತು. ಆದ್ದರಿಂದ ಅರ್ಜುನನ ಹೊರತಾಗಿ ಉಳಿದ ನಾಲ್ಕು ಪಾಂಡವರು ವಿರಾಟರಾಯನ ಸೈನ್ಯದೊಡನೆ ಹೊರಟರು. ಒಂದು ವೇಳೆ ಅಗತ್ಯವೆನಿಸಿದರೆ ಅರ್ಜುನನೂ ಯುದ್ಧಕ್ಕೆ ಹೊರಡಬೇಕೆಂದು ಅವರು ತೀರ್ಮಾನಕ್ಕೆ ಬಂದರು.

ಯುದ್ಧದಲ್ಲಿ ಕುರು ಸೈನ್ಯಕ್ಕೂ ಮತ್ತು ವಿರಾಟರಾಯನ ಸೈನ್ಯಕ್ಕೂ ಕೈಗೆ ಕೈ ಹತ್ತಿತು, ವಿರಾಟರಾಯನ ಸೈನ್ಯ ಎಷ್ಟು ಬೇಕಾದಷ್ಟು ಉತ್ತಮವಾಗಿ ಯುದ್ಧ ಮಾಡಿದರೂ ಅದು ಕೌರವ ಸೇನೆಯ ಮುಂದೆ ನಿಲ್ಲಲಾಗಲಿಲ್ಲ. ಸುಶರ್ಮನ ಬಾಣ ಪ್ರಯೋಗದಿಂದ ವಿರಾಟರಾಯನು ಬಸವಳಿದು ಶತ್ರುವಾದ ಕೌರವರ ವಶವಾದನು. ಇದರಿಂದ ವಿರಾಟರಾಯನ ಸೈನ್ಯಕ್ಕೆ ದಿಕ್ಕು ತೋಚದಂತಾಯಿತು. ಆಗ ಧರ್ಮರಾಯನು ಭೀಮನಿಗೆ 'ವಿರಾಟನ ಸೈನ್ಯವೆಲ್ಲ ಅನಾಯಕವಾಯಿತಲ್ಲ! ಅವನ ಕುಲಕ್ಕೆ ಕೇಡು ಬಂದಂತಾಯಿತು; ಇನ್ನು ಸುಮ್ಮನಿರುವದು ಉಚಿತವಲ್ಲ; ವಿರಾಟರಾಯನನ್ನು ಬಂಧ ವಿಮುಕ್ತನನ್ನಾಗಿ ಮಾಡಬೇಕೆಂದನು. ಅಣ್ಣನ ಮಾತುಗಳಿಂದ ಹುರಿಗೊಂಡ ಭೀಮಸೇನನು ಸುಶರ್ಮನ ಸೇನೆಯನ್ನು ಕ್ಷಣದಲ್ಲಿ ನಿರ್ನಾಮ ಮಾಡಿದನು. ಇದನ್ನು ಕಂಡ ಸುಶರ್ಮನು ಯುದ್ಧವನ್ನು ಬಿಟ್ಟು ಪ್ರಾಣ ಭಯದಿಂದ ಓಡಿ ಹೋದನು. ಅಂದಿನ ರಾತ್ರಿಯ ಯುದ್ಧದಲ್ಲಿ ಧರ್ಮರಾಯನು ಸುಶರ್ಮನನ್ನು ಹಿಡಿದು ತುರುಗಳನ್ನು ಬಿಡುಗಡೆ ಮಾಡಿದನು. ಆಮೇಲೆ ಸುಶರ್ಮನಿಗೆ ಜೀವದಾನ ಮಾಡಿ, ವಿಜಯಿಯಾದ ವಿರಾಟ ಸಂತೋಷದಿಂದ ಊರಿಗೆ ಹೊರಡಲು ಸಿದ್ಧವಾದನು.

ಈ ರೀತಿಯಾಗಿ ನಡೆದ ದಕ್ಷಿಣಗೋಗ್ರಹಣ ಪ್ರಸಂಗವನ್ನು ಕವಿ ಕುಮಾರ ವ್ಯಾಸನು ಉತ್ತಮವಾಗಿ ಚಿತ್ರಿಸಿದ್ದಾನೆ.

15 ಪ್ರಶ್ನೆ - ವಿರಾಟ ಪರ್ವದಲ್ಲಿ ಚಿತ್ರಿತವಾದ 'ಅಭಿಮನ್ಯುವಿನ ವಿವಾಹವನ್ನು' ಚರ್ಚಿಸಿರಿ.

ಉತ್ತರ — ಪಾಂಡವರು ಕೌರವರನ್ನು ಗೆದ್ದಮೇಲೆ ಮರುದಿನ ಪ್ರಾತಃಕಾಲ ಮಂಗಳ ಮಜ್ಜನವನ್ನು ಪೂರೈಸಿ, ಗಂಧ ಮಾಲ್ಯಾಂಬರಗಳಿಂದ ಭೂಷಿತರಾಗಿ ವಿರಾಟರಾಯನ ಅರಮನೆಯನ್ನು ಪ್ರವೇಶಿಸಿ

ಧರ್ಮರಾಯನು ಸಿಂಹಾಸನ ಏರಿ ಕುಳಿತನು. ಉಳಿದ ತಮ್ಮಂದಿರು ಅವನ ಚರಣ ಬಳಿಯಲ್ಲಿ ಕುಳಿತರು. ಆಗ ಉತ್ತರನು ತನ್ನ ತಂದೆಯ ಜೊತೆಗೆ ಬಂದು ತಂದೆಗೆ ಪಾಂಡವರ ಪರಿಚಯ ಮಾಡಿಕೊಟ್ಟನು. ಇದನ್ನು ಕೇಳಿದ ವಿರಾಟನು ಭಯದಿಂದ ನಡುಗಿ ರತ್ನಖಚಿತವಾದ ದಿವ್ಯಾಭರಣಗಳನ್ನು ಅರ್ಪಿಸಿ, ಧರ್ಮರಾಯನ ಕಾಲಿಗೆ ಬಿದ್ದು ಸರ್ವ ಅಪರಾಧಗಳನ್ನು ಮನ್ನಿಸಿ ನಮ್ಮನ್ನು ಉದ್ಧರಿಸಬೇಕೆಂದನು! ಆ ವೇಳೆಗೆ ಈ ಸುದ್ದಿಯನ್ನು ಕೇಳಿ ಮಗಳೊಡನೆ ಸುದೇಷ್ಣಾದೇವಿಯು ಬಂದು ದ್ರೌಪದೀದೇವಿಗೆ ಕಾಣಿಕೆಯನ್ನು ಅರ್ಪಿಸಿದಳು.

ಆಗ ವಿರಾಟರಾಜನು ಇಂದೇ ಧರ್ಮರಾಜನನ್ನು ತನ್ನ ರಾಜ್ಯಕ್ಕೆ ಅಧಿಪತಿಯಾಗಿ ಪಟ್ಟಾಭಿಷೇಕ ಮಾಡುವೆನೆಂದು ಹೇಳಿದನು. ಆಗ ಧರ್ಮರಾಜನು ಮುಗುಳ್ನಗೆಯನ್ನು ಸೂಸುತ್ತ 'ಅಯ್ಯೋ ನಿನ್ನ ಮಧುರ ನುಡಿಗಳ ಅಭಿಷೇಕದಿಂದಲೇ ನಾನು ಸಂತೃಪ್ತನಾಗಿದ್ದೇನೆ. ಆದ್ದರಿಂದ ನನಗೆ ಬೇರೆ ಪಟ್ಟಾಭಿಷೇಕವು ಬೇಡವೆಂದನು. ಆಗ ಉತ್ತರಕುಮಾರನು ಧರ್ಮರಾಯನಿಗೆ ನಮಸ್ಕರಿಸಿ "ಪ್ರಭು ಈ ನನ್ನ ತಂಗಿ ಉತ್ತರೆಯನ್ನು ಅರ್ಜುನನಿಗೆ ಅರ್ಪಿಸಲು ತಮ್ಮ ಅನುಮತಿಯನ್ನು ಇತ್ತು ಅನುಗ್ರಹಿಸಬೇಕು. ಎಂದನು. ಆಗ ಧರ್ಮರಾಯನು ಪ್ರತ್ಯುತ್ತರವನ್ನೀಯಲು ಅರ್ಜುನನ ಮುಖವನ್ನು ನೋಡಿದನು. ಆತನು "ಮಹಾರಾಜ ನಾನು ಇವಳಿಗೆ ಪಾಠವನ್ನು ಹೇಳಿಕೊಟ್ಟಿದ್ದೇನೆ. ಅವಳು ನನಗೆ ಮಗಳಿದ್ದ ಹಾಗೆಯೇ. ನಿಮಗೆ ಇಷ್ಟವಿದ್ದರೆ ಅವಳನ್ನು ಅಭಿಮನ್ಯುವಿನಗೆ ವಿವಾಹ ಮಾಡಿಕೊಡಿರಿ ಎಂದನು. ಆ ಮಾತಿಗೆ ವಿರಾಟ ಮಹಾರಾಜನು ಬಹು ಸಂತೋಷವಾಗಿ ಒಪ್ಪಿಕೊಂಡನು. ಒಡನೆಯೇ ಪಾಂಡವರು ಈ ವಿಚಾರವನ್ನು ಶ್ರೀ ಕೃಷ್ಣ ಪರಮಾತ್ಮನಿಗೆ ತಿಳಿಸುವಂತೆ ಹೇಳಿ ಕಾಣಿಕೆಯೊಡನೆ ದೂತರನ್ನು ದ್ವಾರಕೆಗೆ ಅಟ್ಟಿದರು.

ಪಾಂಡವರ ಏಳಿಗೆಯನ್ನು ದೂತರ ಮುಖದಿಂದ ಕೇಳಿದ ಶ್ರೀ ಕೃಷನು ವಿರಾಟ ನಗರಕ್ಕೆ ಹೊರಟು ಬಂದನು. ಆತನ ಆಗಮನದಿಂದ ಸಂತೋಷ ಸಂಭ್ರಮವೆಲ್ಲ ತುಂಬಿತು. ಆ ನಂತರ ಆತನ ಅಭಿಪ್ರಾಯದಂತೆ

ಒಂದು ಶುಭದಿನದಂದು ಉತ್ತರೆ–ಅಭಿಮನ್ಯುವಿನ ವಿವಾಹ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ವಿರಾಟ ಮಹಾರಾಜನು ರಾಜ್ಯ, ಭಾಂಡಾರ, ಆನೆ, ಕುದುರೆ, ದಾಸಿಯರು ಇತ್ಯಾದಿ ಅಸಂಖ್ಯಾತ ಬಳುವಳಿಯನ್ನು ಅಳಿಯನಿಗೆ ಕೊಟ್ಟು ಗೌರವಿಸಿದನು. ಮದುವೆಗೆಂದು ಬಂದ ಬಂಧು ಬಾಂಧವರಿಗೆ ಉಡುಗೊರೆಗಳನ್ನು ಕೊಟ್ಟು ಗೌರವಿಸಿದನು. ಶ್ರೀ ಕೃಷ್ಣ ಪರಮಾತ್ಮನು ನೂತನ ವಧು-ವರರನ್ನು, ವಿವಾಹಕ್ಕೆ ಬಂದಿದ್ದ ಇತರರನ್ನು ಬಾಯ್ತುಂಬ ಹರಿಸಿ ಉದ್ಧರಿಸಿದರು. ಶ್ರೀ ಕೃಷ್ಣ ಪರಮಾತ್ಮನ ಆಗಮನದಿಂದ ಎಲ್ಲರ ಉತ್ತರೋತ್ತರ ಅಭಿವೃದ್ಧಿಯಾಯಿತೆಂದು ಪಾಂಡವರು ಭಾವಿಸಿದರು.

ಈ ರೀತಿಯಾಗಿ ವಿರಾಟ ಪರ್ವದ ಕೊನೆಗೆ ಅಭಿಮನ್ಯುವಿನ ವಿವಾಹವನ್ನು ಕವಿ ಕುಮಾರವ್ಯಾಸ ಉತ್ತಮವಾಗಿ ವರ್ಣಿಸಿದ್ದಾನೆ.

ಪ್ರಶ್ನೆ– ವಿರಾಟ ಪರ್ವ ಸಂಗ್ರಹದಲ್ಲಿ ಚಿತ್ರಿತವಾವ 'ಕೀಚಕ'ನ ಪಾತ್ರವನ್ನು ವಿವರಿಸಿ ಹೇಳಿರಿ.

ಉತ್ತರ – ಕೀಚಕನು ವಿರಾಟರಾಯನ ಪತ್ನಿಯ ತಮ್ಮನು. ಈತನು ವಿರಾಟರಾಯನ ಆಸ್ಥಾನದಲ್ಲಿರುವದರಿಂದ ಕೌರವರ ಆಟ ಇಲ್ಲಿ ಏನೂ ಸಾಗುವಂತಿರಲಿಲ್ಲ. ಆದ್ದರಿಂದ ಪಾಂಡವರು ತಮ್ಮ ಅಜ್ಞಾತ ವಾಸವನ್ನು ನಿರ್ಭಯವಾಗಿ ಕಳೆಯಬಹುದಾದ್ದರಿಂದ ಎಲ್ಲರೂ ವೇಷಾಂತರದಿಂದ ಬಂದು ಸೇರಿದರು.

ಕೀಚಕನು ಕ್ರೂರನೂ, ಮತ್ತು ಕುಬುದ್ಧಿಯವನೂ ಆಗಿದ್ದನು. ಹೀಗಿರುವಾಗ ಇವನು ಒಮ್ಮೆ ತಮ್ಮ ಅಕ್ಕನನ್ನು ನೋಡುವದಕ್ಕಾಗಿ ಅರಮನೆಗೆ ಬಂದಾಗ, ಅವನ ಅಕ್ಕ ಕೀಚಕನನ್ನು ಆದರದಿಂದ ಸತ್ಕರಿಸಿದಳು. ಈ ಸತ್ಕಾರದಲ್ಲಿ ಸಂತುಷ್ಟನಾದ ಅವನು ಸೈರಂಧ್ರಿ ವೇಷದಲ್ಲಿರುವ ದ್ರೌಪದಿಯನ್ನು ನೋಡಿದನು, ಆಕೆಯ ಸೌಂದರ್ಯಕ್ಕೆ ಕೀಚಕನು ಮಾರು ಹೋದನು. ಅದರೊಡನೆ ಆತನ ಹೃದಯದಲ್ಲಿ ಮನ್ಮಥನ ಬಾಣಗಳು ಆಳವಾಗಿ ನಟ್ಟವು. ಆಗ ಕೀಚಕನು ನಾಚಿಕೆ, ಹೇಸಿಕೆಯನ್ನು ಬಿಟ್ಟು ಅವಳನ್ನು ನೋಡುತ್ತ "ಅಕ್ಕ ಇವಳಾರು ?" ಎಂದು ಕೇಳಿಯೇ

ಬಿಟ್ಟನು. ಅದಕ್ಕೆ ಅವಳು, 'ಇವಳು ಗಂಧರ್ವ ರಮಣಿ, ಕಾರಣಾಂತರ ದಿಂದ ನಮ್ಮನ್ನು ಆಶ್ರಯಿಸಿದ್ದಾಳೆ, ಆದರೆ ಇವಳು ನಿನಗೆ ತಕ್ಕವಳಲ್ಲವೆಂದು ನುಡಿದಾಗ, ಆ ಮಾತನ್ನು ಕೇಳಿ ಕೀಚಕನು ಹೊರಟು ಹೋಗಿ ಪುನಃ ಸೈರಂಧ್ರಿ ವೇಷದಲ್ಲಿರುವ ದ್ರೌಪದಿಯನ್ನು ಸಂಧಿಸಿ 'ಸೈರಂಧ್ರಿ ಮನ್ಮಥ ನಿಂದಾದ ಗಾಯಗಳಿಗೆ ತಕ್ಕ ಮದ್ದು ನೀನೊಬ್ಬಳೇ ಬಲ್ಲೆ, ದಯವಿಟ್ಟು ನನ್ನನ್ನು ಬದುಕಿಸಿಕೋ ಎಂದು ಬೇಡಿಕೊಂಡನು. ಅದಕ್ಕೆ ಅವಳು ಕೋಪಗೊಂಡು 'ದುರಾತ್ಮಾ ನಿನ್ನ ವಂಶವನ್ನು ಕೊಯ್ದುಕೊಳ್ಳುವ ಕಾರ್ಯಕ್ಕೆ ಏಕೆ ಪ್ರಯತ್ನಿಸುವೆ' ? ಇದರಿಂದ ಬರುವ ಅಪಕೀರ್ತಿಗೆ ಹೇಸ ಬೇಡವೇ ಎಂದಳು. ಅದಕ್ಕೆ ಕೀಚಕನು ಹೆದರಲಿಲ್ಲ, ಮತ್ತು ಅವನಿಗೆ ಯಾರ ಭಯವೂ ಇರಲಿಲ್ಲ. ಅದಕ್ಕಾಗಿ 'ನೀನು ನನ್ನನ್ನು ಕಾಪಾಡಲೇ ಬೇಕು' ಎಂದು ಅವಾಚ್ಯ ಶಬ್ದಗಳಿಂದ ನುಡಿದನು. ಅದಕ್ಕೆ ಕೋಪಗೊಂಡು ಅವಳು ಅರಮನೆಗೆ ಹಿಂದುರಿಗಿದಳು.

ಕೀಚಕನು ನಿರ್ವಾಹವಿಲ್ಲದೇ ತನ್ನ ಅಕ್ಕನಾದ ಸುದೀಷ್ಣೆಯನ್ನು ಮೊರೆ ಹೋಗುವ ಪ್ರಸಂಗವು ಬಂದಾಗ ಅವಳ ಹತ್ತಿರಕ್ಕೆ ಹೋಗಿ ಆ ಚಲುವೆಯಾದ ಸೈರಂಧ್ರಿಯನ್ನು ನನಗೆ ಒಪ್ಪಿಸು ಎಂದಾಗ "ಅವಳ ತೊಡಕೊಂದು ಬೇಡ, ನಮ್ಮ ರಾಣಿವಾಸದಲ್ಲಿ ಯಾವ ರಮಣಿಯನ್ನು ನೀನು ಬಯಸಿದರೂ ತಕ್ಷಣವೇ ವಿವಾಹವನ್ನು ಮಾಡುತ್ತೇನೆ." ಎಂದು ಸಮಾಧಾನ ಮಾಡಿದರೂ ಸುದೀಷ್ಣೆಯ ನುಡಿಗೆ ಅವನು ಬಗ್ಗಲಿಲ್ಲ. ಕೊನೆಗೆ ಕೀಚಕನು ಅವಳನ್ನು ಅತಿಯಾಗಿ ಬೇಡಿಕೊಳ್ಳಲು ಪ್ರಾರಂಭಿಸಿದ್ದ ರಿಂದ ಮೋಹದಿಂದ ತಮ್ಮನನ್ನು ಮೃದಡವುತ್ತ, ನಾಳೆ ಮುಂಜಾನೆ ಸೈರಂಧ್ರಿಯನ್ನು ನಿನ್ನ ಅರಮನೆಗೆ ಕಳಿಸುತ್ತೇನೆ ಎಂದು ಹೇಳಿ ಕಳುಹಿಸಿದಳು.

ಹಗಲು ಕಳೆದು ರಾತ್ರಿಯಾತು; ಕಾಮುಕನಾದ ಕೀಚಕನು ವಿರಹ ವೇದನೆಯಿಂದ ಕ್ಷಣವೊಂದನ್ನು ಯುಗವನ್ನಾಗಿ ಕಳೆದನು. ಸುರ್ಯೋ ದಯವಾಗುತ್ತಿದ್ದಂತೆಯೇ ಸುದೀಷ್ಣೆಯು ಸೈರಂಧ್ರಿಯ ವೇಷದಲ್ಲಿರುವ ದ್ರೌಪದಿಯನ್ನು ಕೀಚಕನ ಮನೆಗೆ ಮಧುವನ್ನು ತರಲು ಹೇಳಿದಾಗ, ದ್ರೌಪದಿಯು ಈ ಕಾರ್ಯಕ್ಕೆ ಬೇರೆಯವರನ್ನು ನಿಯಮಿಸು ಎಂದು ಕೇಳಿಕೊಂಡಳು. ಅದಕ್ಕೆ ಪುರಸ್ಕಾರ ದೊರೆಯದೇ ಅವಳೇ ಅಲ್ಲಿಗೆ

ಹೋಗುವಂತಹ ಪ್ರಸಂಗವು ಒದಗಿತು. ಕೀಚಕನ ಮನೆಗೆ ಅವಳು ಪ್ರವೇಶಿಸಿದಾಗ ಕೀಚಕನು ಧನ್ಯನೆಂದು ಕೊಂಡನು. ಮತ್ತು ಅವಳನ್ನು ಆದರದಿಂದ ಸತ್ಕರಿಸಿದನು. ಕಾಮುಕನಾದ ಅವನ ಅವಾಚ್ಯ ನುಡಿಗಳನ್ನು ಕೇಳಿ ಅವಳಿಗೆ ಅಸಹ್ಯವೆನಿಸಿತು. ಆಗ ಅವಳು 'ಎಲೆ ಪಾಪಿ ಅನ್ಯಾಯವನ್ನಾಡಬೇಡ, ಬಾಯಲ್ಲಿ ಹುಳಬಿದ್ದಾವು' ಈ ಬಗೆಯಾದ ನಾಯಿತನ ನಡೆಸಬಾರದು ಎಂದಾಗ, ಅವನು ನಿನ್ನ ಮಾತಿನಿಂದ ನನಗೆ ಎಷ್ಟೂ ನೋವಾಗುವದಿಲ್ಲವೆಂದು ಅವಳ ಕೈಯನ್ನು ಹಿಡಿಯಲು ಹೋದನು. ಅವಳು ಕೊಸರಿಕೊಂಡು, ಕೈಯಲ್ಲಿದ್ದ ಮಧುಪಾತ್ರೆಯನ್ನು ಅಲ್ಲಿಯೇ ಒಗೆದು ವಿರಾಟನ ಸಭೆಗೆ ಓಡಿದಳು. ಅವನು ಅವಳನ್ನು ಬೆನ್ನಟ್ಟಿ ರಾಜನ ಸಭೆಯನ್ನು ಲಕ್ಷಿಸದೇ, ಅವಳನ್ನು ಅಲ್ಲಿಯೇ ಕೆಳಕ್ಕೆ ಕೆಡವಿ ಮೆಟ್ಟಿದನು.

ಇದನ್ನು ಕಂಡು ಭೀಮಸೇನನಿಗೆ ಬಹಳ ಕೋಪ ಬಂದಿತು. ಇದರಿಂದ ಅವನ ಅಂತರಂಗವು ಕತಕತ ಕುದಿಯಿತು. ಆಗ ಅವನು ಕೋಪಗೊಂಡು ಸಭೆಯಿಂದ ಎದ್ದು ಹೊರಗೆ ಹೋದನು.

ಇತ್ತಕಡೆಗೆ ಕೀಚಕನು ಕೊಟ್ಟಂತಹ ತೊಂದರೆಯಿಂದ ದ್ರೌಪದಿಗೆ ಬಹಳ ಕಸಿವಿಸಿಯಾಯಿತು. ಮತ್ತು ತನ್ನ ಬದುಕು ನರಕವೆಂದು ಕೊಂಡಳು. ಏನಿದ್ದರೂ ಭೀಮಸೇನನೇ ಶರಣ್ಯವೆಂದು,ಅವನನ್ನು ಹುಡುಕುತ್ತ ಪಾಕಶಾಲೆಗೆ ಬಂದಳು. ಅಲ್ಲಿ ಮಲಗಿದ್ದ ಭೀಮಸೇನನ್ನು ಕಂಡು, ಅವನನ್ನು ಮೆಲ್ಲನೆ ಎಬ್ಬಿಸಿದಳು ಮತ್ತು ತನಗೆ ತುಂಬಿದ ಸಭೆಯಲ್ಲಾದ ಅವಮಾನವನ್ನು ಗಂಡನಿಗೆ ಹೇಳಿದಳು. ಭೀಮಸೇನನು ಮೊದಲು ಅವಳ ದುಃಖವನ್ನು ಪರಿಹರಿಸಲು ಒಪ್ಪದಿದ್ದರೂ ನಂತರ 'ಎಲೈ ಸುಂದರಿ, ನಿನ್ನ ಭಯವನ್ನು ದೂವಿರವಿಡು. ಇಗೋ ಅಣ್ಣನು ಹಾಕಿದ ಗೆರೆಯನ್ನು ದಾಟಬಿಟ್ಟಿದ್ದೇನೆ. ಇನ್ನು ಕೀಚಕನ ಹುಟ್ಟಡಗಿಸುತ್ತೇನೆ. ಇನ್ನು ನಿನ್ನ ಕ್ಷೇಮುಸಮಾಚಾರ ನನ್ನದು. ನಾಟ್ಯಮಂಟಪವನ್ನು ಸಂಕೇತ ಸ್ಥಾನವಾಗಿ ಸೂಚಿಸಿ ಆ ನಾಯಿಯನ್ನು ಅಲ್ಲಿಗೆ ಬರಿಸು ಎಂದನು. ನಾನು ಅಲ್ಲಿಯೇ ಮರೆಯಾಗಿದ್ದು ಅವನ ಬಸುರನ್ನು ಬಗೆದು ಶಾಕಿನಿಯರನ್ನು ತೃಪ್ತಿಪಡಿಸುತ್ತೇನೆ. ಗಂಡನ ಮಾತು ಕೇಳಿ ದ್ರೌಪತಿಗೆ ಬಹಳ ಸಂತೋಷವಾಯಿತು. ನಂತರ ಅವಳು ಮನೆಗೆ ಹಿಂದಿರುಗಿದಳು.

ನಿತ್ಯದಂತೆ ಆ ದಿನವೂ ಕೀಚಕನು ಅರಮನೆಗೆ ಹೊರಟವನು ದಾರಿಯಲ್ಲಿ ವೃಕೋದರ ವಲ್ಲಭೆಯನ್ನು ಕಂಡು "ಸುಂದರಿ, ಹಿಂದಿನ ರಾತ್ರಿಯೆಲ್ಲ ಒಂದು ಯುಗದಂತೆ ಕಾಲಕಳೆದುದಾಯಿತು. ಮನ್ಮಥನು ನನ್ನ ಪಾಲಿಗೆ ಯಮನಾಗಿ ಬಿಟ್ಟಿದ್ದಾನೆ. ದಯಾಶೀಲೆಯಾದ ನೀನು ನನ್ನ ಮೇಲೆ ಕೃಪೆ ತೋರು" ಎಂದನು. ಅದಕ್ಕೆ ದ್ರೌಪದಿಯು 'ಯಾರಿಗೂ ಗೊತ್ತಾಗದಂತೆ ಇಂದು ಸಂಜೆ ನಾಟ್ಯ ಶಾಲೆಗೆ ಬಾ' ನಾನು ಕತ್ತಲೆಯಲ್ಲಿ ಮೈಮರೆಸಿ ಕೊಂಡು ಬರುತ್ತೇನೆಂದಳು. ಆ ಮಾತನ್ನು ಕೇಳಿ ಕೀಚಕನಿಗೆ ಬಹಳ ಸಂತೋಷವಾಯಿತು. ತಾನು ಧನ್ಯನಾದೆನೆಂದುಕೊಂಡನು.

ಹಗಲು ಕಳೆಯಿತು. ಅತ್ತ ಕೀಚಕನು ಸಂಜೆಯಾಗುತ್ತಲೇ ಅತ್ಯಂತ ಸಂಭ್ರಮದಿಂದ ದಿವ್ಯಾಲಂಕಾರವನ್ನು ಧರಿಸಿದನು. ಆನಂತರ ಕೇವಲ ವಯ್ಯಾರದಿಂದ ಕೈಯಲಿದ್ದ ಸುರಗಿಯನ್ನು ತಿರುವುತ್ತ ನಾಟ್ಯಗೃಹಕ್ಕೆ ಹೋದನು. ಅಲ್ಲಿ ಮಲಗಿದ್ದ ವ್ಯಕ್ತಿಯನ್ನು ಸೈರಂಧ್ರಿಯಂದೇ ಭ್ರಮಿಸಿದ್ದ ಕಾಮಿಯು ಆತ್ಮೀಯವಾದ ಮಾತುಗಳನ್ನಾಡುತ್ತ, ಮಲಗಿದ್ದ ಭೀಮನ ಮೈಯನ್ನು ಕೇವಲ ಲಂಪಟತನದಿಂದ ಸವರಿಸಿದನು. ಆಗ ಆ ದೇಹವು ಕರ್ಕಶವಾಗಲು, ಎಲೈ ಸೈರಂಧ್ರೀ, ನೀನೇನು ಮಾಯಾವೇಷವನ್ನು ಧರಿಸಿದೆಯಾ! ನಿನ್ನ ದೇಹ ಎಷ್ಟು ಕರ್ಕಶವಾಗಿದೆಯಲ್ಲಾ! ಎಂದನು. ಆಗ ದ್ರೌಪದಿಯ ವೇಷದಲ್ಲಿರುವ ಭೀಮಸೇನನು ಮೆಲಕ್ಕೆದ್ದು ಪರಸತಿಗೆ ಕಣ್ಣು ಹಾಕಿದವರಿಗೆಲ್ಲಾ ಹಾಗೆಯೇ ಆಗುವದು ಎನ್ನುತ್ತಾ ಆತನ ಮುಂದಲೆಯನ್ನು ಹಿಡಿದು ಜಗ್ಗಿದನು. ಇಷ್ಟಾಗುವದರಲ್ಲಿ ಕೀಚಕನಿಗೆ ಅಲ್ಲಿರುವವಳು ಹೆಂಗಸು ಅಲ್ಲವೆಂಬುದು ಅರ್ಥವಾಗಿತ್ತು. ಕುಚೋದ್ಯಕ್ಕೆ ತೊಡಗಿದ ಕೀಚಕನ ಕರುಳನ್ನು ಬಗೆದು ಹಾಕಬೇಕೆಂದು ಅವನ ಮೇಲೆ ಬಿದ್ದನು. ಭೀಮನ ಹೊಡೆತಗಳಿಗೆ ಕೀಚಕನು ತತ್ತರಿಸಿ, ಕರುಳಗಳನ್ನು ಕಾರಿಕೊಂಡು ಕೆಳಕ್ಕೆ ಬಿದ್ದು ಪ್ರಾಣಬಿಟ್ಟನು.

ಈ ರೀತಿಯಾಗಿ ಭೀಮನು ಕೀಚಕನ ಸಂಹಾರವನ್ನು ಮಾಡಿದನು. ಇವನ ಸಾವು ದಿಕ್ಕಿದಿಕ್ಕುಗೆ ಹಬ್ಬಿತು. ಕೀಚಕನು ಕುಬುದ್ಧಿಯವನು ಆಗಿದ್ದನು. ಆದ್ದರಿಂದಲೇ ಭೀಮನಿಂದ ಸಂಹಾರವಾಗಬೇಕಾಯಿತು. ಈ

ಕಾಮುಕನಾದ ಕೀಚಕನ ಪಾತ್ರ ಚಿತ್ರವನ್ನು ಕವಿಕುಮಾರವ್ಯಾಸನು ವಿರಾಟಪರ್ವದಲ್ಲಿ ಉತ್ತಮವಾಗಿ ಚಿತ್ರಿಸಿದ್ದಾನೆಂದು ಹೇಳಬಹುದು.

ಪ್ರಶ್ನೆ:—ವಿರಾಟಪರ್ವದಲ್ಲಿ ಚಿತ್ರಿತವಾದ ಉತ್ತರ ಗೋಗ್ರಹಣ ಪ್ರಸಂಗವನ್ನು ಕುರಿತು ಬರೆಯಿರಿ.

ಉತ್ತರ:—ಕೌರವರ ಕೈಕೆಳಗಿದ್ದ ಸೈನ್ಯ ಉತ್ತರ ದಿಕ್ಕಿನ ಗೋವುಗಳನ್ನು ಸೆರೆಹಿಡಿಯಿತು. ಆಗ ಜೀವಭಯದಿಂದ ಓಡಿಹೋಗುತ್ತಿದ್ದ ಗೋಪಾಲಕರಲ್ಲಿ ಒಬ್ಬನನ್ನು ಹಿಡಿದು ಅವನ ಮೂಗಿನ ಮೇಲೆ ಸುಣ್ಣದ ಒಟ್ಟನ್ನು ಇಟ್ಟರು. ಯುದ್ಧಕ್ಕೆ ಹೋಗಿದ್ದ ವಿರಾಟನು ಇನ್ನೂ ಹಿಂದಿರುಗಿ ಬರಲಿಲ್ಲವಾದ್ದರಿಂದ ಅವನ ಮಗನಾದ ಉತ್ತರ ಕುಮಾರನು ಸಿಂಹಾಸನದಲ್ಲಿ ಕುಳಿತಿದ್ದನು. ಆಗ ಆತನು ಭಯದಿಂದ ಗೋಪಾಲಕನನ್ನು ಕಂಡು ಎಲವೋ ಇದೇನು ನಿನ್ನ ಅವಸ್ಥೆ ? ಎಂದು ಕೇಳಿದಾಗ ಆಗ ಗೋಪಾಲಕನು ಸ್ವಾಮಿ, ಕುರುಸೇನೆ ಉತ್ತರ ದಿಕ್ಕಿನಿಂದ ಬಂದು ತುರುಗಳನ್ನು ಸೆರೆಹಿಡಿದಿದೆ. ತಾವು ಊರೊಳಗಿದ್ದೇ ಯುದ್ಧ ಮಾಡುವಂತಿದ್ದರೆ ಕೋಟೆಯ ರಕ್ಷಣೆಯನ್ನು ಕೈಕೊಳ್ಳಬೇಕು, ಇಲ್ಲದಿದ್ದರೆ ಸೈನ್ಯಬಲದೊಡನೆ ಒಡನೆಯೇ ಪ್ರಯಾಣವನ್ನು ಬೆಳಿಸಬೇಕು ಎಂದನು. ಆ ಮಾತುಗಳನ್ನು ಕೇಳುತ್ತಿದ್ದ ಉತ್ತರಕುಮಾರನು ವೀರಾವೇಶಬಂದಂತಾವನಾಗಿ ಯುದ್ಧವನ್ನು ಬಡಬಡಿಸುತ್ತಿರುವ ಆ ಕುನ್ನಿಗಳನ್ನು ಅತ್ತಕಡೆಗೆ ನೂಕು ಎಂದನು. ಒಂದು ವೇಳೆ ನಾನು ಕೋಪಗೊಂಡು ಯುದ್ಧಕ್ಕೆ ನಿಂತರೆ ದೇವತೆಗಳು ನಡುಗುತ್ತಾರೆ. ಆ ಕೌರವ ಕುನ್ನಿಗಳು ನನ್ನಿದಿರಲ್ಲಿ ನಿಲ್ಲಲು ಸಾಧ್ಯವೇ? ಎಂದನು. ಈ ರೀತಿಯಾಗಿ ಉತ್ತರನು ತನ್ನ ಪೌರುಷದ ಮಾತುಗಳನ್ನು ಮಾತನಾಡುತ್ತ ನನ್ನ ಮಾತುಗಳನ್ನು ಹೊಂದಿಕೊಳ್ಳುವಂತಹ ಸಾರಥಿಯೊಬ್ಬನು ದೊರೆತರೆ ಕೌರವನ ಸೈನ್ಯಕ್ಕೆಲ್ಲಾ ಹಬ್ಬವನ್ನು ಮಾಡುವೆನು ಎಂದನು.

ಹೀಗೆ ಉತ್ತರನು ಬಾಯಿಗೆಬಂದಂತೆ ಮಾತನಾಡುತ್ತಿರುವದನ್ನು ಅರ್ಜುನನು ಕೇಳಿ ರೇಗಿದನು. ಆಗ ಅವನು ದ್ರೌಪದಿಯನ್ನು ಏಕಾಂತದಲ್ಲಿ ಕರೆದು ಸಾರಥಿ ಬೇಕಾದರೆ ತಾನು ರಾಜಕುಮಾರನಿಗೆ ಸಾರಥಿಯಾಗಬಲ್ಲೆ ಎಂದು ಉತ್ತರೆಗೆ ಸೂಚಿಸು ಎಂದಾಗ ಅವಳು ಉತ್ತರೆಗೆ ಹೇಳಲು

ಅದನ್ನು ಕೇಳಿ ಬಹಳ ಸಂತೋಷವಾಯಿತು. ಆಗ ಅವಳು ಆ ವಿಷಯವನ್ನು ಉತ್ತರನಿಗೆ ಬಂದು ಹೇಳಲು ಅವನು ಆ ಕಾರ್ಯಕ್ಕೆ ಸಂತೋಷದಿಂದ ಒಪ್ಪಿಕೊಂಡಾಗ, ಉತ್ತರೆಯೇ ಸ್ವತಃ ಹೋಗಿ ಬೃಹನ್ನಳೆಯನ್ನು ಕರೆದುಕೊಂಡು ಬಂದಳು. ಆಗ ಉತ್ತರನು ಬೃಹನ್ನಳೆಯ ವೇಷದಲ್ಲಿರುವ ಅರ್ಜುನನ್ನು ಹೊಗಳಿದನು. ಭೀಷ್ಮಾದಿಗಳೊಡನೆ ಸಮರವೆಂದರೆ ಸಾಮಾನ್ಯವಲ್ಲವೆಂದು ಅರ್ಜುನನು ಹೇಳಿದಾಗ ಉತ್ತರಕುಮಾರನು ಅಯ್ಯೋ, ನಾನಿರುವಾಗ ಭೀಷ್ಮಾದಿಗಳು ನಿನ್ನನ್ನು ಏನು ಮಾಡುವರೆಂದು ಎಂದನು.

ಉತ್ತರಕುಮಾರನ ಅಪ್ಪಣೆಯಂತೆ ಅರ್ಜುನನು ಉತ್ತಮವಾದ ರಥವನ್ನು ಹೂಡಿದನು. ಉತ್ತರಕುಮಾರ ಮತ್ತು ಬೃಹನ್ನಳೆಯ ವೇಷದಲ್ಲಿರುವ ಅರ್ಜುನನು ಕವಚವನ್ನು ಧರಿಸಿ ಸೈನ್ಯದೊಡನೆ ಯುದ್ಧಕ್ಕೆ ಹೊರಟರು. ಆಗ ಅರ್ಜುನನು ರಥದ ಕುದುರೆಗಳ ಬೆನ್ನು ಚಪ್ಪರಿಸಿದಾಗ ಅವು ವಾಯುವೇಗದಲ್ಲಿ ಹೋಗಹತ್ತಿದವು. ರಾಜಕುಮಾರನ ಜೊತೆಯಲ್ಲಿ ಹೊರಟ ಸೈನ್ಯ ಹಿಂದಕ್ಕೆ ಉಳಿಯಿತು.

ಅರ್ಜುನನು ಉತ್ತರಕುಮಾರನೊಡನೆ ಯುದ್ಧರಂಗವನ್ನು ಪ್ರವೇಶಿಸಿದನು. ಶತ್ರುಗಳ ಆಯುಧವನ್ನು ನೋಡುತ್ತಿದ್ದಂತೆಯೇ ಉತ್ತರನ ಎದೆ ಧಸ್ಸೆಂದಿತು. ಅಗ ಉತ್ತರಕುಮಾರನು ಇನ್ನು ಮುಂದಕ್ಕೆ ರಥವನ್ನು ನಡೆಯಿಸಬೇಡ ಮತ್ತು ಕೈಯ ಚಾವಟಿಗೆಯನ್ನು ಅತ್ತಬೀಸು, ಇನ್ನು ರಥವನ್ನು ಹಿಂದಕ್ಕೆ ತಿರುಗಿಸು' ಎಂದನು.

ಆಗ ಅರ್ಜುನನು ಉತ್ತರನ ಮಾತನ್ನು ಲಕ್ಷ್ಯಕ್ಕೆ ತೆಗೆದು ಕೊಳ್ಳಲೇ ಇಲ್ಲ. ಅವನ ರಥವು ಕ್ಷಣಕ್ಷಣಕ್ಕೆ ಕೌರವರ ಸೈನ್ಯವನ್ನು ಸಮೀಪಿಸುತ್ತಿತ್ತು. ಅದರೂ ಉತ್ತರನು 'ರಥವನ್ನು ನಿಲ್ಲಿಸು, ಎಂದು ಕೂಗಿಕೊಂಡನು. ಇಷ್ಟಾದರೂ ಸಹ ಅರ್ಜುನನು ಮುಗುಳ್ನಗೆಯನ್ನು ಸೂಸುತ್ತ ರಥವನ್ನು ಮುಂದುವರಿಸುತ್ತಲೇ ಇದ್ದನು. ಹೀಗೆಯೇ ಅರ್ಜುನನು ಉತ್ತರನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಸಮೀಪದಲ್ಲಿಯೇ ಇದ್ದ ಒಂದು ಶಮಿವೃಕ್ಷದ ಬಳಿ ಹೋದನು. ಆಗ ಅರ್ಜುನನು ಆ ಮರದ ಮೇಲಿರುವ ಆಯುಧವನ್ನು ಉತ್ತರನಿಗೆ ತೆಗೆದುಕೊಡುವಂತೆ ಹೇಳಿದನು. ಆಗ ಉತ್ತ

ಕನು ಆ ಆಯುಧಗಳನ್ನು ಮುಟ್ಟುವದಕ್ಕೆ ಭಯವಾಗುತ್ತದೆ ಎಂದನು ಆಗ ಬೃಹನ್ನಳೆಯ ವೇಷದಲ್ಲಿರುವ ಅರ್ಜುನನು ಅವನಿಗೆ ಬುದ್ಧಿವಾದವನ್ನು ಹೇಳಿ ಆ ಅಸ್ತ್ರಗಳನ್ನು ತೆಗೆಯಿಸಿಕೊಂಡು, ಅರ್ಜುನನು ತನ್ನ ಪರಿಚಯವನ್ನು ಮಾಡಿಕೊಟ್ಟನು. ಊರ್ವಶಿಯಿಂದ ಬಂದ ಶಾಪ ತನಗೆ ಇಂದು ಮುಗಿದು ಹೋಯಿತೆಂದು ತನ್ನ ಕೈಯಲ್ಲಿರುವ ಬಳೆಯನ್ನು ಒಡೆದು ಹಾಕಿದನು. ಆಗ ಅರ್ಜುನನು ಧರ್ಮರಾಜನಿಗೆ ಜಯವಾಗಲೆಂದು ಗಾಂಡೀವ ಧನುಸ್ಸನ್ನು ಟೇಂಕಾರಮಾಡುತ್ತ ಶತ್ರುಗಳಿಗೆ ಇದಿರಾಗಿ ರಥವನ್ನು ಹೊಡೆದುಕೊಂಡು ಬಂದನು.

ಇತ್ತ ಕೌರವನು ಸೈನ್ಯಸಜ್ಜಿತನಾಗಿ ಹೊರಡುತ್ತಿರಲು ಅದನ್ನು ಕಂಡ ಅರ್ಜುನನು ಉತ್ತರನಿಗೆ ರಥವನ್ನು ಅತ್ತನಡೆಯಿಸಿ ಕೌರವನನ್ನು ತಡೆ ಎಂದನು ಆಗ ಉತ್ತರಕುಮಾರನು ಕುದುರೆಗಳ ಬೆನ್ನನ್ನು ಅತಿ ಉತ್ಸಾಹದಿಂದ ಚಪ್ಪರಿಸುತ್ತ 'ಅಯ್ಯಾ ಕೌರವ, ಕುರುವಂಶದ ವೈರಿಸ್ವರೂಪನಾದ ಅರ್ಜುನನು ಬರುತ್ತಿದ್ದಾನೆ' ಎಂದು ಅಬ್ಬರಿಸುತ್ತಾ ಅವನನ್ನು ಸಮೀಪಿಸಿದನು. ಆಗ ಮಧ್ಯದಲ್ಲಿಯೇ ದ್ರೋಣನು ಅರ್ಜುನನ್ನು ತಡೆದಾಗ, ಅವನು ಎಂಟು ಬಾಣಗಳನ್ನು ಬಿಟ್ಟು ಮುಂದೆ ಹೋದನು. ಆತನ ಬಾಣದಿಂದ ಕರುಸೇನೆ ಚಲ್ಲಾಪಿಲ್ಲೆಯಾಯಿತು. ಕೌರವರಾಯ ಅರ್ಜುನನ ಸೆರೆಯಾಗುತ್ತಾನೆಂದು ಜನರೆಲ್ಲರೂ ಹೆದರುತ್ತಿರಲು ಭೀಷ್ಮಾಚಾರ್ಯ ದ್ರೋಣಾಚಾರ್ಯನೊದಲಾದವರು ಅರ್ಜುನನ್ನು ಎದುರಿಸಿದರು. ಆಗ ಅರ್ಜುನನು ಕೌರವರ ಕಡೆಗೆ ಇರುವ ತುರುಗಳನ್ನು ಬಿಡಿಸಿದನು. ನಂತರ ಅವನು ಬಿಟ್ಟಬಾಣದಿಂದ ಕೃಪನ ಶಿರಸ್ತ್ರಾಣವು ಸೀಳಿತು, ಭೀಷ್ಮಾಚಾರ್ಯರ ಕವಚವು ಹುಯಿತು, ದ್ರೋಣರ ಮೈ ನೋವಾಯಿತು.; ಕರ್ಣನಿಗೆ ಗಾಯವಾಯಿತು; ಅಶ್ವತ್ಥಾಮನು ಮೈಮರೆತನು; ಉಳಿದ ಸೈನಿಕರು ಶಕ್ತಿಗುಂದಿಹೋದರು. ಆಗ ಭೀಷ್ಮ ದ್ರೋಣರು ಪ್ರೋತ್ಸಾಹಿಸಿದ್ದರಿಂದ ಮತ್ತೆ ಉಳಿದ ಸೈನಿಕರು ಹುರಿಗೊಂಡು ಅವನನ್ನು ಮುಸುಕಿದರು. ಅವರು ಮತ್ತೆ ಬಾಣ ಪ್ರಯೋಗವನ್ನು ಮಾಡಿದಾಗ ಅರ್ಜುನನು ಕ್ಷಣಕಾಲ ಮುಳುಗಿದನು. ಅವರ ಬಾಣಗಳೆಲ್ಲವನ್ನು ನಿವಾರಿಸಿಕೊಂಡು ಅರ್ಜುನನು ಬಾಣ ಪ್ರಯೋಗ ಮಾಡಿದಾಗ ಶತ್ರುಸೈನ್ಯ

ಕಣ್ಣಿಗೆ ಕಾಣದಂತಾಯಿತು. ಆಗ ಅಲ್ಲಿ ನೆರೆದ ಎಲ್ಲ ಜನರು ಅರ್ಜುನನ್ನು ಬಾಯ್ತುಂಬ ಹೊಗಳಿದರು. ಕರ್ಣ, ದ್ರೋಣ. ಭೀಷ್ಮ ಮುಂತಾದವರು ಸೋತ ಮೇಲೆ ಕೌರವರಾಯನೇ ಸ್ವತಃ ಬಂದನು. ಸೈನ್ಯವೆಲ್ಲವೂ ಆತನನ್ನು ಸಂರಕ್ಷಿಸಲು ಸಿದ್ಧವಾಗಿನಿಂತಿತ್ತು, ಒಬ್ಬೊಬ್ಬರೊಡನೆ ಯುದ್ಧಮಾಡುತ್ತ ಕುಳಿತುಕೊಳ್ಳುವದು ಸರಿಯಲ್ಲವೆಂದು ಅರ್ಜುನನು ಸಮ್ಮೋಹನಾಸ್ತ್ರವನ್ನು ಹೂಡಿದನು. ಆ ಬಾಣ ಪ್ರಯೋಗದಿಂದ ಕೌರವರ ಸೇನೆ ಮಲಗಿತು ಆಗ ಅರ್ಜುನನು ರಥದಿಂದಿಳಿದು, ಅಲ್ಲಿ ಮಲಗಿದ್ದ ದ್ರೋಣ ಭೀಷ್ಮನಿಗೆ ನಮಸ್ಕರಿಸಿ, ದುರ್ಯೋಧನ, ದುಶ್ಶ್ಯಾಸನರ ವಸ್ತ್ರಾಭರಣಗಳನ್ನು ಸುಲಿಯುಂತೆ ಉತ್ತರನನ್ನು ನೇಮಿಸಿದನು. ಆಗ ಅದನ್ನು ಮುಗಿಸುವಷ್ಟರಲ್ಲಿ ಭೀಷ್ಮರು ಎಚ್ಚತ್ತು ಅರ್ಜುನನ ಕಡೆಗೆ ಬಾಣಪ್ರಯೋಗ ಮಾಡಿದರು. ಆದರೆ ಅರ್ಜುನನು ತನ್ನ ಎರಡು ಬಾಣಗಳಿಂದ ಅವರನ್ನು ಅಡಗಿಸಿ ಉತ್ತರನೊಡನೆ ನಗರಕ್ಕೆ ಬಂದನು.

ಈ ರೀತಿಯಾಗಿ ಅರ್ಜುನನ ಸಾರಥಿತನದಲ್ಲಿ ಉತ್ತರಗೋಗ್ರಹಣ ಪ್ರಸಂಗವನ್ನು ಕವಿಕುಮಾರವ್ಯಾಸನು ಅತಿ ವೈಶಿಷ್ಟ್ಯ ಪೂರ್ಣವಾಗಿ ವಿವರಿಸಿದ್ದಾನೆಂದು ಹೇಳಬಹುದು.

**ಟಿಪ್ಪಣಿ ಬರೆಯಿರಿ.**

೧) ವಿರಾಟ ಪರ್ವದಲ್ಲಿ ಚಿತ್ರಿತವಾದ ಉತ್ತರನ ಪಾತ್ರ.

೨) ವಿರಾಟ ಪರ್ವದಲ್ಲಿ ವ್ಯಕ್ತವಾದ ಅರ್ಜುನನ ಕಾರ್ಯ ಮತ್ತು ಸಾಹಸ.

## ೧. ವಿರಾಟಪರ್ವದಲ್ಲಿ ಚಿತ್ರಿತವಾದ ಉತ್ತರನ ಪಾತ್ರ.

ಉತ್ತರಕುಮಾರನು ವಿರಾಟರಾಜನ ಪುತ್ರ. ಇವನು ರಾಜಕುಮಾರನಾದರೂ ಅಷ್ಟೇನೂ ಧೀರನಲ್ಲ, ಕೇವಲ ಬಾಯ್ಮಾತಿನಲ್ಲಿ ತನ್ನ ಕಾರ್ಯವನ್ನು ತೋರಿಸುವಂತಹ ವ್ಯಕ್ತಿ ಇವನು. ಕನ್ನಡದ ಹಿರಿಯ ಕವಿಯೆನಿಸಿದ ಕುಮಾರವ್ಯಾಸನು ಉತ್ತರ ಗೋಗ್ರಹಣ ಗ್ರಸಂಗದಲ್ಲಿ ಉತ್ತರಕುಮಾರನ ಪಾತ್ರವನ್ನು ಚಿತ್ರಿಸಿ, ಆ ಪಾತ್ರದ ಮೂಲಕ ಹಾಸ್ಯದ ಹೊಳೆಯನ್ನೇ ಹರಿಸಿದ್ದಾನೆ.

ಕೌರವನ ಸೈನಿಕರು ಉತ್ತರ ದಿಕ್ಕಿನ ಗೋವುಗಳನ್ನು ಸೆರೆಹಿಡಿದಾಗ, ಜೀವ ಭಯದಿಂದ ಗೋಪಾಲಕನು ಓಡಿಬಂದು, ಉತ್ತರಕುಮಾರನಿಗೆ ಎಲ್ಲ ವಿಷಯವನ್ನು ಹೇಳಿದಾಗ, ಅವನು ತನ್ನ ಮೀಸೆಯನ್ನು ಹುರಿಮಾಡುತ್ತ, ವೀರಾವೇಶ ಬಂದಂತವನಾಗಿ ಯುದ್ಧ ಬೆದರಿಕೆಯಿಂದ ಬಡಬಡಸುತ್ತಿರುವ ಈ ಕುನ್ನಿಗಳನ್ನು ನೂಕೋ, ಒಂದು ವೇಳೆ ನಾನು ಕೋಪಗೊಂಡು ಯುದ್ಧಕ್ಕೆ ನಿಂತರೆ ದೇವತೆಗಳು ನಡುಗಿ ಹೋಗುತ್ತಾರೆ. ಈ ಕುನ್ನಿಗಳು ನನಗೆ ಲೆಕ್ಕವೇ? ಎಂದನು. ಆಗ ಗೋಪಾಲಕನು ಶತ್ರುಗಳಿಗೆ ತಮ್ಮ ಕೈಗುಣವನ್ನು ತೋರಿಸಿ ಉದ್ಧರಿಸಬೇಕೆಂದನು. ಆಗ ಉತ್ತರಕುಮಾರನು ಅದನ್ನು ಸತ್ಯವೆಂದು ನಂಬಿದನು. ಮತ್ತು ಸುತ್ತಲೂ ಕುಳಿತಿದ್ದ ಸುಂದರಿಯರನ್ನು ಅವಲೋಕಿಸಿದನು. ಸೋದರ ರಾಜ್ಯವನ್ನು ಅಪಹರಿಸಿ, ಅವರ ಹೆಂಡತಿಯನ್ನು ಪರಾಭವಗೊಳಿಸಿ ಆ ಪಾಂಡವರನ್ನೆಲ್ಲಾ ಅಡವಿಗಟ್ಟಿದ ಮಾತ್ರದಿಂದ ಶೂರನೆಂದು ಭಾವಿಸಿದನೋ ಆ ಕೌರವ? ನನ್ನನೇನು ಯುಧಿಷ್ಟಿರನೆಂದು ಬಗೆದನೋ? ಎಂದು ಪೌರುಷದಿಂದ ಕೂಗಾಡಿದನು.

ಹೀಗೆಯೇ ಉತ್ತರನು ಪೌರುಷದ ಮಾತು ಆಡುತ್ತ ಆಡುತ್ತ, ಅನ್ಯಾಯವಾಗಿ ನನಗೆ ಸಾರಥಿಯಾಗಬಲ್ಲವನು ನಿನ್ನಿನ ಯುದ್ಧದಲ್ಲಿ ಸತ್ತು ಹೋದನೆಂದು ನುಡಿದಾಗ, ಅರ್ಜುನನು ಅದನ್ನು ಕೇಳಿ ರೇಗಿದನು, ದ್ರೌಪದಿಯನ್ನು ಏಕಾಂತದಲ್ಲಿ ಕರೆದು 'ತನ್ನನ್ನು ಅರ್ಜುನನ ಸಾರಥಿಯೆಂಬುದಾಗಿ, ಬೇಕಾದರೆ ರಾಜಕುಮಾರನಿಗೆ ಸಾರಥಿಯಾಗಬಲ್ಲವನೆಂದು' ಉತ್ತರೆಗೆ ಹೇಳು ಎಂದನು ಇದನ್ನು ಕೇಳಿ ಉತ್ತರೆಗೆ ಸಂತೋಷವಾಯಿತು. ಆಗ ಅವಳು ಈ ವಿಚಾರವನ್ನು ಉತ್ತರನಿಗೆ ಹೇಳಲು ಅವನಿಗೂ ಬಹಳ ಸಂತೋಷವಾಯಿತು. ನಂತರ ಉತ್ತರೆಯು ಬೃಹನ್ನಳೆಯ ವೇಷದಲ್ಲಿರುವ ಅರ್ಜುನನನ್ನು ಕರೆದುಕೊಂಡು ಬಂದು ಅವನನ್ನು ಸಾರಥಿಯನ್ನಾಗಿ ನೇಮಿಸಿದಳು.

ಉತ್ತರಕುಮಾರನ ಅಪ್ಪಣೆಯಂತೆ ಅರ್ಜುನನು ರಥವನ್ನು ಸಿದ್ಧಪಡಿಸಿದನು ರಾಣಿವಾಸದ ಹೆಂಗಳೆಯರಿಂದ ಮಂಗಳಾರತಿಯನ್ನು ಸ್ವೀಕರಿಸಿದ ರಾಜಕುಮಾರನು ಠೀವಿಯಿಂದ ರಥವೇರಿದನು. ರಥವು ಕ್ಷಣಮಾತ್ರದಲ್ಲಿ ಯುದ್ಧ ರಂಗವನ್ನು ಸಮೀಪಿಸಿತು. ಶತ್ರುಗಳಲ್ಲಿರುವ ಆಯುಧವನ್ನು ಕಂಡ ಉತ್ತರನ ಎದೆ ಝುಲ್ಲೆಂದಿತು. ವೈರಿಸೈನ್ಯವೆಂಬುದು ಆತನಿಗೆ

ಡಾವಾಗ್ನಿಯಂತೆ ತೋರಹತ್ತಿತು. ಆಗ ಉತ್ತರನು ಎಲೈಬೃಹಂಡಳಿಯೇ ಇನ್ನು ಮುಂದಕ್ಕೆ ರಥವನ್ನು ನಡೆಯಿಸಬೇಡ. ಕೈಯಲ್ಲಿರುವ ಚಾವಟಿಗೆಯನ್ನು ಬಿಸುಟು, ರಥವನ್ನು ಹಿಂದುರಿಗಿಸು ಎಂದನು.

ಅರ್ಜುನನು ಉತ್ತರಕುಮಾರನ ಮಾತನ್ನು ಗಮನಿಸದೇ ಕ್ಷಣ ಕ್ಷಣಕ್ಕೆ ರಥವು ಕೌರವಸೇನೆಯನ್ನು ಸಮೀಪಿಸುತ್ತಿತ್ತು. ರಾಜಕುಮಾರನಿಗೆ ಕಣ್ಣಿಂದ ಭಯಂಕರವಾದ ದೃಶ್ಯವನ್ನು ನೋಡಲಾಗಲಿಲ್ಲ,ಆದಕ್ಕಾಗಿ ಅವನು ರಥವನ್ನು ನಿಲ್ಲಿಸು ಎಂದು ಕೂಗಿಕೊಂಡನು ಆಗ ಅರ್ಜುನನು ಅವನ ಮಾತಿಗೆ ಲಕ್ಷ್ಯಹಾಕದೇ ಮುಗಳ್ನಗೆಯಿಂದ ರಥವನ್ನು ಮುಂದೆ ಹೊಡೆಯುತ್ತಿದ್ದನು. ಆಗ ಉತ್ತರಕುಮಾರನು ಗತ್ಯಂತರವಿಲ್ಲದೇ 'ಈ ಪಾಪಿ ಸಾರಥಿ ನನ್ನನ್ನು ಅನ್ಯಾಯವಾಗಿ ಕೊಂದ' ಎನ್ನುತ್ತ ರಥದಿಂದ ಜಿಗಿದು ಹಿಂದಕ್ಕೆ ಓಡಲು ಪ್ರಾರಂಭಿಸಿದನು.

ಓಡುತ್ತಿದ್ದ ಉತ್ತರನನ್ನು ಕಂಡು ಅರ್ಜುನನು ಕೆರಳಿದನು. ರಥವನ್ನು ಕ್ಷಣಮಾತ್ರದಲ್ಲಿ ನಿಲ್ಲಿಸಿ 'ಎಲವೋ ನೀನು ಒಂದು ಹೆಜ್ಜೆ ಮುಂದೆಯಿಟ್ಟರೆ ನಿನ್ನ ಶಿರವನ್ನು ಕತ್ತರಿಸಿ ಹಾಕುತ್ತೇನೆಂದು' ಅಬ್ಬರಿಸಿ ಅವನನ್ನು ನಿಲ್ಲಿಸಿ, ಎಲವೋ ಹೆಂಗಸರ ಇದುರಿನಲ್ಲಿ ಅಷ್ಟು ಜೋರಾಗಿ ಹುಟ್ಟುಗುಟ್ಟದೆ! ಈಗ ಕ್ಷತ್ರಿಯ ವಂಶಕ್ಕೆ ಅಪಮಾನಮಾಡಿ ಓಡಿ ಹೋಗುವೆಯಾ ? ಎಂದು ಹೇಳಿ ಹಿಂದಕ್ಕೆ ಎಳೆತಂದನು. ಯುದ್ಧದಲ್ಲಿ ಬೆನ್ನು ಕೊಟ್ಟು ಓಡಿದರೆ ಹೆಜ್ಜೆ ಹೆಜ್ಜೆಗೂ ಮಹಾಪಾತಕ; ಎಂದನು ಅರ್ಜುನನು.

ಅರ್ಜುನನು ಉತ್ತರನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಶಮೀವೃಕ್ಷದ ಬಳಿಗೆ ಹೋದನು. ಅಲ್ಲಿ ಗಿಡದ ಮೇಲಿರುವ ಆಯುಧಗಳನ್ನೆಲ್ಲಾ ತೆಗೆದುಕೊಂಡು, ಶತ್ರುಗಳ ಎದುರಿಗೆ ರಥವನ್ನು ತೆಗೆದುಕೊಂಡು ಹೋಗಿ ಅರ್ಜುನನು ಕೌರವರೆಲ್ಲರನ್ನು ಸೋಲಿಸಿದನು. ಈ ರೀತಿಯಾಗಿ ಕುಮಾರವ್ಯಾಸನು ಉತ್ತರ ಗೋಗ್ರಹಣ ಪ್ರಸಂಗದಲ್ಲಿ ಉತ್ತರಕುಮಾರನ ಪಾತ್ರವನ್ನು ಚಿತ್ರಿಸಿ ಜನ ಮನಸ್ಸನ್ನು ಆನಂದಗೊಳಿಸುವದಲ್ಲದ್ದೇ, ಹಾಸ್ಯದ ಹೊಳೆಯನ್ನು ಹರಿಸಿದ್ದಾನೆಂದು ಹೇಳಬಹುದು.

# ೨. ವಿರಾಟಪರ್ವದಲ್ಲಿ ವ್ಯಕ್ತವಾದ ಅರ್ಜುನನ ಶೌರ್ಯ ಮತ್ತು ಸಾಹಸ.

ಕುಮಾರವ್ಯಾಸ ವಿರಚಿತ ವಿರಾಟಪರ್ವದಲ್ಲಿ ಅರ್ಜುನನು ಬೃಹನ್ನಳೆಯ ವೇಷದಲ್ಲಿ ಬಂದು ವಿರಾಟರಾಯನ ಆಸ್ಥಾನದಲ್ಲಿ ಆಶ್ರಯವನ್ನು ಪಡೆಯುತ್ತಾನೆ. ಆದರೆ ಬೃಹನ್ನಳೆಯ ವೇಷದಲ್ಲಿರುವ ಅರ್ಜುನನು ಶೂರನೂ ಧೀರನೂ ಮತ್ತು ಮೂರು ಲೋಕದ ಗಂಡನೂ ಆಗಿದ್ದನು.

ಕೌರವರ ಸೈನ್ಯ ಉತ್ತರ ದಿಕ್ಕಿನ ಗೋವುಗಳನ್ನು ಸೆರೆಹಿಡಿದಾಗ ಗೋಪಾಲಕರು ಅಂಜಿ, ಜೀವಭಯದಿಂದ ಓಡಿ ಬಂದು ಎಲ್ಲ ವಿಷಯವನ್ನು ವಿರಾಟರಾಯನ ಪುತ್ರನಾದ ಉತ್ತರಕುಮಾರನ ಎದುರಿಗೆ ಹೇಳಲು, ಅವನು ಹೆಂಗಳೆಯರೆದುರಿಗೆ ಮೀಸೆ ತಿರುವುತ್ತ ಪೌರುಷದ ಮಾತುಗಳನ್ನಾಡುತ್ತ ಕೌರವರ ಸಂಹಾರ ಮಾಡುತ್ತೇನೆ ಎನ್ನಹತ್ತಿದನು. ಮತ್ತು ಅನ್ಯಾಯವಾಗಿ ನನಗೆ ಸಾರಥಿಯಾಗಬಲ್ಲವನು ನಿನ್ನಿನ ಯುದ್ಧದಲ್ಲಿ ಸತ್ತುಹೋದನು. ಈಗ ನನ್ನ ಮನಸ್ಸಿಗೆ ಹೊಂದಿಕೊಳ್ಳುವಂತಹ ಸಾರಥಿ ದೊರೆತರೆ ಕೌರವರ ಸೈನ್ಯವನ್ನು ಸಂಹಾರ ಮಾಡುತ್ತೇನೆ ಎಂದಾಗ, ಅರ್ಜುನನು ಇದನ್ನು ಕೇಳಿ ರೇಗಿದನು; ಆಗ ಅವನು ದ್ರೌಪದಿಯನ್ನು ಏಕಾಂತದಲ್ಲಿ ಕರೆದು, ತನ್ನನ್ನು ಅರ್ಜುನನ ಸಾರಥಿಯೆಂಬುದಾಗಿ, ಬೇಕಾದರೆ ಈಗ ರಾಜಕುಮಾರನಿಗೆ ಸಾರಥಿಯಾಗಬಲ್ಲ ಎಂದು ಹೇಳೆಂದಾಗ, ಅವಳು ಉತ್ತರೆಗೆ ಹೇಳಿದಾಗ, ಅವಳು ಉತ್ತರನ ಎದುರಿಗೆ ಹೇಳಿದಾಗ ಅವನಿಗೆ ಬಹಳ ಸಂತೋಷವಾಗಿ ಒಪ್ಪಿಕೊಂಡನು. ಆಗ ಉತ್ತರೆಯೇಸ್ವತಃ ಹೋಗಿ ಬೃಹನ್ನಳೆಯನ್ನು ಸಾರಥಿಯನ್ನಾಗಿ ಒಪ್ಪಿಸಿ ಆಸ್ಥಾನಕ್ಕೆ ಕರೆತಂದಳು.

ಉತ್ತರಕುಮಾರನ ಅಪ್ಪಣೆಯಂತೆ ಅರ್ಜುನನು ರಥವನ್ನು ಸಿದ್ಧಪಡಿಸಿದನು, ನಂತರ ಇಬ್ಬರೂ ರಥವನ್ನು ಹತ್ತಿ ಕುಳಿತು, ಅರ್ಜುನನು ತೇಜಿಗಳನ್ನು ಚಪ್ಪರಿಸಿದನು. ಆಗ ಅವು ವಾಯುವೇಗವನ್ನೂ ಮೀರಿ ಹೋಗುತ್ತಿರಲು ರಾಜಕುಮಾರನ ಜೊತೆಗೆ ಹೊರಟ ಸೈನ್ಯವು ಹಿಂದೆಯೇ ಉಳಿಯಿತು.

ಮೂರುಲೋಕದ ಗಂಡನೆನಿಸಿಕೊಂಡ ಅರ್ಜುನನು ಉತ್ತರಕುಮಾರ ನೊಡನೆ ಕ್ಷಣಮಾತ್ರದಲ್ಲಿ ರಣರಂಗವನ್ನು ಸಮೀಪಿಸಿದನು. ಆಗ ಉತ್ತ ರನು ರಥವನ್ನು ಮುಂದೋಡಿಸ ಬೇಡವೆಂದರೂ ಅದನ್ನು ಅವನು ಲಕ್ಷಿಸದೇ ಕ್ಷಣ ಕ್ಷಣಕ್ಕೂ ಕುರುಸೇನೆಯ ಸಮೀಪಕ್ಕೆ ರಥವನ್ನು ತಂದನು. ಉತ್ತರನು ಯುದ್ಧಕ್ಕೆ ಎಷ್ಟು ಹಿಂಜರಿದರೂ ಅರ್ಜುನನು ಅವನನ್ನು ಶಮೀವೃಕ್ಷಕ್ಕೆ ಕರೆದುಕೊಂಡು ಬಂದು ಅಲ್ಲಿರುವ ಆಯುಧಗಳನ್ನು ತೆಗೆದು ಕೊಂಡು, ಬೃಹಂದಳೆಯ ವೇಷದಲ್ಲಿರುವ ಅರ್ಜುನನು ತನ್ನ ನಿಜ ಸ್ವರೂಪ ವನ್ನು ತೋರಿಸಿದನು.

ಕೌರವನು ಸೈನ್ಯ ಸುಸಜ್ಜಿತನಾಗಿ ಹೊರಡುತ್ತಿರಲು ಅರ್ಜುನನು ಅದನ್ನು ಕಂಡು, ಉತ್ತರಕುಮಾರನಿಗೆ ರಥವನ್ನು ಅತ್ತ ನಡೆಯಿಸಿ ಕೌರವನನ್ನು ತಡೆಯೆಂದನು. 'ಅಯ್ಯೋ ಕೌರವ, ಕುರುವಂಶದ ದವಾನಲ ಬರುತ್ತಿದ್ದಾನೆ. ಹಿಂದಕ್ಕೆ ಹೊರಡು' ಎಂದು ಉತ್ತರನು ಅಬ್ಬರಿಸಿದನು. ಅದನ್ನು ಕಂಡು ದ್ರೋಣರು ಅರ್ಜುನನ್ನು ಮಧ್ಯದಲ್ಲಿಯೇ ತಡೆದರು. ಆಗ ಅರ್ಜುನನು ನಗುತ್ತ ಅವರ ಪಾದಗಳಿಗೆ ಎರಡು ಬಾಣಗಳನ್ನು ಕಾಣಿಕೆಯಾಗಿ ಸಮ ರ್ಪಿಸಿ ಮುಂದುವರೆದನು. ಆ ಬಾಣ ಪ್ರಯೋಗದಿಂದ ಕೌರವರಾಯನ ಸೈನ್ಯ ಚಲ್ಲಾಪಿಲ್ಲಿಯಾಯಿತು. ಇನ್ನೇನು ಕೌರವರಾಯನು ಅರ್ಜುನನ ಸೆರೆಯಾದನೆಂದು ಎಲ್ಲರೂ ಹೆದರುತ್ತಿರಲು ಭೀಷ್ಮ, ದ್ರೋಣ, ಕರ್ಣ, ಶಕುನಿ, ಮೊದಲಾದ ಕುರುವೀರರೆಲ್ಲರೂ ಒಟ್ಟಾಗಿ ಅರ್ಜುನನ್ನು ಎದುರಿಸಿ ದರು. ಆಗ ಅರ್ಜುನನು ಕೌರವರ ಕಡೆಗಿದ್ದ ತುರುಗಳನ್ನು ಬಿಡಿಸಿ ಕೌರವ ರಾಯನ ಜೊತೆಗೆ ಯುದ್ಧಕ್ಕೆ ನಿಂತನು. ಆತನ ಬಾಣಪ್ರಯೋಗದಿಂದ ಕೃಪನ ಶಿರಸ್ತ್ರಾಣವು ಸೀಳಿತು.; ಭೀಷ್ಮರ ಕವಚವು ಹರಿದು ಹೋಯಿತು.; ದ್ರೋಣಾಚಾರ್ಯರಿಗೆ ಮೈ ನೋವಾಯಿತು; ಕರ್ಣನಿಗೆ ಗಾಯಗಳಾದವು; ಅಶ್ವತ್ಥಾಮಾಚಾರ್ಯರು ಮೈಮರೆತು, ಉಳಿದ ಸೈನಿಕರು ಸಪ್ಪಗಾದರು. ಆಗ ಭೀಷ್ಮ ಮತ್ತು ದ್ರೋಣರು ಉಳಿದ ಸೈನಿಕ ಸಮೂಹವನ್ನು ಹುರು ದುಂಬಿಸಿ ಮತ್ತೇ ಅರ್ಜುನನ್ನು ಮುಸುಕಿದರು. ಅವರು ಬಿಟ್ಟಂಥ ಬಾಣ ಪ್ರಯೋಗದಿಂದ ಅರ್ಜುನನು ಕ್ಷಣಕಾಲ ಮುಳುಗಿ ಹೋದನು. ಆದರೆ ಅವನು ಅದನ್ನೆಲ್ಲಾ ಸವರಿಸಿಕೊಂಡು ಅತಿಮಹಾರಥರನ್ನೆಲ್ಲಾ ಒಬ್ಬಬ್ಬ

ರನ್ನಾಗಿ ಭಂಗಿಸುತ್ತ ಹೊರಡಲು, ಆತನ ಬಾಣಗಳಿಂದ ಭೂಮಿ ಆಕಾಶ ತುಂಬಿ ಹೋಗಿ ಶತ್ರುಸೇನೆ ಕಣ್ಣಿಗೆ ಕಾಣದಂತಾಯಿತು. ಆಗ ಜನರೆಲ್ಲರೂ ಅರ್ಜುನನನ್ನು ಬಾಯ್ತುಂಬ ಹೊಗಳಿದರು. ದ್ರೋಣ, ಕರ್ಣ, ಭೀಷ್ಮರು ಸೋತು ಹೋದ ಮೇಲೆ ಕೌರವರಾಯನೇ ಸ್ವತಃ ಯುದ್ಧಕ್ಕೆ ಬಂದನು. ಆತನನ್ನು ಸಂರಕ್ಷಿಸುವದರ ಸಲುವಾಗಿ ಸುತ್ತಲೂ ಸೈನ್ಯವು ನಿಂತಿತ್ತು. ಒಬ್ಬೊಬ್ಬರೊಡನೆ ಯುದ್ಧ ಮಾಡುವದು ಸರಿಯಲ್ಲವೆಂದು ಅರ್ಜುನನು ಎಲ್ಲರನ್ನು ಒಮ್ಮೆಲೆ ಗೆಡೆಯಲು ಸಹಾಯಕವಾಗುವಂತೆ ಸಮ್ಮೋಹನಾಸ್ತ್ರ ವನ್ನು ಹೂಡಿದನು. ಆ ಸಮ್ಮೋಹನಾಸ್ತ್ರದ ಪ್ರಯೋಗದಿಂದ ಕುರಸೇನೆಯು ಮೈಮರೆತು ಮಲಗಿತು.

ಸಮ್ಮೋಹನಾಸ್ತ್ರದಿಂದ ಕೌರವ ಸೈನ್ಯದವರೆಲ್ಲರೂ ಮಲಗಿದ ಮೇಲೆ ಅರ್ಜುನನು ರಥದಿಂದಿಳಿದು ಶತ್ರು ಸೇನೆಯನ್ನು ಪ್ರವೇಶಿಸಿದನು. ಅಲ್ಲಿ ಮಲಗಿದ್ದ ಭೀಷ್ಮ ದ್ರೋಣರಿಗೆ ನಮಸ್ಕರಿಸಿದನು. ನಂತರ ಕರ್ಣ, ದುರ್ಯೋಧನ, ದುಶ್ಯಾಸನರ ಮೈ ಮೇಲಿರುವ ವಸ್ತ್ರಾಭರಣಗಳನ್ನು ಉತ್ತರನಿಗೆ ಸುಲಿಯುವಂತೆ ನೇಮಿಸಿದನು. ಅಷ್ಟರಲ್ಲಿ ಭೀಷ್ಮರು ಎಚ್ಚತ್ತು ಅರ್ಜುನನಿಗೆ ಬಾಣಪ್ರಯೋಗ ಮಾಡಿದರು. ಆದರೆ ಅರ್ಜುನನು ಎರಡು ಬಾಣಗಳಿಂದ ಅವರನ್ನು ಅಡಗಿಸಿ ವಿರಾಟನಗರಕ್ಕೆ ಬಂದನು.

ಈ ರೀತಿಯಾಗಿ ಉತ್ತರ ಗೋಗ್ರಹಣ ಪ್ರಸಂಗದಲ್ಲಿ ಅರ್ಜುನನ ಶೌರ್ಯ ಮತ್ತು ಸಾಹಸವನ್ನು ಕವಿ ಕುಮಾರವ್ಯಾಸನು ಉತ್ತಮವಾಗಿ ಚಿತ್ರಿಸಿದ್ದಾನೆ.

ಪ್ರಶ್ನೆ:—ವಿರಾಟಪರ್ವದ ಶೈಲಿಯನ್ನು ಕುರಿತು ಬರೆಯಿರಿ.

ಉತ್ತರ:—ಮಹಾಭಾರತದ ತಿರುಳೆಂದರೆ ವಿರಾಟಪರ್ವವೆಂದು ಹೇಳಬಹುದು. ವಿರಾಟಪರ್ವದಲ್ಲಿ ಪಾಂಡವರ ಅಜ್ಞಾತವಾಸ ಕೊನೆಗೊಂಡು, ಅವರ ಅಭ್ಯುದಯವು ಮೊದಲಾಗುತ್ತದೆ. ಈ ಪರ್ವದಲ್ಲಿ ಎಷ್ಟೊ ಮೈನಿಮಿರಿಸುವಂತಹ ಘಟನೆಗಳಿವೆ. ಇದಲ್ಲದೇ ಈ ಪರ್ವದಲ್ಲಿಯಂತೂ ಕನ್ನಡದ ಹಿರಿಯ ಕವಿಯೆನಿಸಿದ ಕುಮಾರವ್ಯಾಸನು ಉತ್ತಮ ಸಂಗ್ರಹಕಾರನೆನಿಸಿ

ಕೊಂಡಿದ್ದಾನೆ. ಪಾಂಡವರು ವಿರಾಟರಾಯನ ಆಸ್ಥಾನದಲ್ಲಿ ಸೇವಾವೃತ್ತಿಗೆ ನಿಂತಿದ್ದು, ಕೀಚಕನ ಸಂಹಾರ, ಉತ್ತರ ಮತ್ತು ದಕ್ಷಿಣ ಗೋಗ್ರಹಣ ಪ್ರಸಂಗ ಪಾಂಡವರ ಅಭ್ಯುದಯ, ಹಾಗೂ ಉತ್ತರೆಯ ಮದುವೆ, ಮುಂತಾದ ವೈವಿಧ್ಯ ಪೂರ್ಣವಾದ ಘಟನೆಗಳು ಇಲ್ಲಿ ಚಿತ್ರಿತಗೊಂಡಿವೆ.

ಮಹಾ ಭಾರತದ ಪ್ರಧಾನ ರಸವು ವೀರರಸವಾದ್ದರಿಂದ ಅದು ಇಲ್ಲಿ ಯಥೇಚ್ಛವಾಗಿ ಬಂದುದರಿಂದ ವಿರಾಟಪರ್ವಕ್ಕೆ ಕಳೆ ಬಂದಿದೆ. ಇದಲ್ಲದೇ ಈ ಪರ್ವದಲ್ಲಿ ಮಹಾಭಾರತ ಯುದ್ಧದ ರೀತಿಯು ತಕ್ಕ ಮಟ್ಟಿಗೆ ಬಂದು ದನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿ ವೀರರಸಕ್ಕೆ ಪ್ರಾಧಾನ್ಯತೆ ಸಿಕ್ಕಂತೆ ವಿಶ್ವಮೋಹಕವಾದ ಶೃಂಗಾರ ರಸಕ್ಕೆ ಅಷ್ಟು ಮಹತ್ವ ಪೂರ್ಣವಾದ ಸ್ಥಾನ ದೊರಕಿಲ್ಲವೆನ್ನಬಹುದು.

ವಿರಾಟನಗರದಲ್ಲಿ ದ್ರೌಪದಿಯ ಸ್ಥಿತಿ ಬಹಳ ಇಕ್ಕಟ್ಟಿನದಾಗಿತ್ತು. ಶೂರರಾದ ಅವಳ ಗಂಡಂದಿರ ಎದುರಿಗೆ ಅವಳಿಗೆ ಎಷ್ಟೋ ಆಪತ್ಕಾಲಗಳು ಬಂದಿದ್ದರೂ ಸಹ ಆಕೆ ಅವರ ರಕ್ಷಣೆಯನ್ನು ಕೋರುವ ಹಾಗಿರಲಿಲ್ಲ. ಅವಳ ರೂಪವೇ ಅವಳಿಗೆ ಶತ್ರುವಾಗಿತ್ತು. ಅವಳ ಲೋಕೋತ್ತರವಾದ ಸೌಂದರ್ಯ ವನ್ನು ಕೀಚಕನು ಮೋಹಗೊಂಡಿರುವದರಲ್ಲಿ ಆಶ್ಚರ್ಯವೆನಿಲ್ಲ. ವಿರಾಟ ನಗರದಲ್ಲಿ ಕೀಚಕನದೇ ಸರ್ವಾಧಿಕಾರ, ಇಷ್ಟೇ ಅಲ್ಲದೇದೊರೆಯ ಹೆಂಡತಿಯ ತಮ್ಮ. ಕೀಚಕನು ಸುಧೇಷ್ಣೆಯರ ಮೇಳದಬಲೆಯರ ನಡುವಿದ್ದ ದ್ರೌಪದಿಯನ್ನು ಯಾವಾಗ ನೋಡಿದನೋ ಅಂದೇ ಅವನ ಮನಸ್ಸು ಅವಳಲ್ಲಿ ಗಾಢವಾಗಿ ನಟ್ಟಿತು. ಎಷ್ಟು ಜನ ಬುದ್ಧಿ ಹೇಳಿದರೂ ಕೇಳಲಿಲ್ಲ ಆ ಕೀಚಕ. ಅವಳನ್ನು ರಾಜಸಭೆಯಲ್ಲಿ ಒದ್ದು ಅಪಮಾನ ಮಾಡಿದನು, ಆ ದ್ರೌಪದಿಗಾದ ಅಪಮಾನವನ್ನು ಕಂಡು ಭೀಮನು ಕೀಚಕ ನನ್ನು ಸಂಹಾರಮಾಡಿದನು. ಇದು ಕೀಚಕನ ವಿರಹ ಶೃಂಗಾರ ಚೇಷ್ಟೆ, ಶೃಂಗಾರಭಾಸ. ಈ ಪ್ರಸಂಗವನ್ನು ಓದುತ್ತಿದ್ದಂತೆಯೇ ದ್ರೌಪಯ ಮೇಲೆ ಅನುಕಂಪ ಹುಟ್ಟುತ್ತದೆ. ಆದರೆ ಕನ್ನಡ ಕವಿಯಾದ ಕುಮಾರವ್ಯಾಸನು ಕೀಚಕನ ತಾಪದುರಿಯನ್ನು ಚನ್ನಾಗಿ ವಿವರಿಸಿದ್ದಾನೆಂದು ಹೇಳಬಹುದು.

ಈ ಸನ್ನಿವೇಶದುದ್ದಕ್ಕೂ ನಮ್ಮ ಸಹಾನುಭೂತಿಯನ್ನು ದ್ರೌಪದಿಯ ಕಡೆಗೆ ಸೆಳೆದಿದ್ದು ಇದು ಸಹಜವಾದದ್ದುಯೆಂದು ಹೇಳಬಹುದು. ಮಹಾಭಾರತದಲ್ಲಿ ಬಹಳ ತೊಂದರೆಗೆಯೀಡಾದ ವ್ಯಕ್ತಿಯೆಂದರೆ ದ್ರೌಪದಿ. ಅವಳಿಗಾಗಿ ಮಹಾಭಾರತವು ಉತ್ಪನ್ನವಾದದ್ದು. ಇದಲ್ಲದೇ ಕೀಚಕನಿಂದಾದ ತೊಂದರೆಯನ್ನು ಕಂಡು ವಾಚಕರ ಮನಸ್ಸು ಅವಳ ಕಡೆಗೆ ಹೋಗುತ್ತದೆ.

ಉತ್ತರ ಗೋಗ್ರಹಣ ಪ್ರಸಂಗದಲ್ಲಿ ಕುಮಾರವ್ಯಾಸನು ಉತ್ತರ ಕುಮಾರನ ಪಾತ್ರವನ್ನು ಮತ್ತು ಅವನ ಪೌರಷದ ಮಾತುಗಳನ್ನು ಚನ್ನಾಗಿ ನಿರೂಪಿಸಿದ್ದಾನೆ. ಇವನನ್ನು ಕವಿಯು ಹಾಸ್ಯಾಸ್ಪದ ವ್ಯಕ್ತಿಯನ್ನಾಗಿ ಮಾಡಿ ಅವನ ಮೂಲಕ ಹಾಸ್ಯದ ಹೊಳೆಯನ್ನು ಹರಿಸಿ, ವಾಚಕರ ಮನಸ್ಸನ್ನು ಸೆಳೆದಿದ್ದಾನೆಂದು ಹೇಳಬಹುದು.

ಕೊನೆಯದಾಗಿ ಕುಮಾರವ್ಯಾಸನು ವ್ಯಾಸ ಮಹಾಭಾರತವನ್ನು ಅನುಸರಿಸಿದ್ದರೂ ಸಹ, ಅನೇಕ ಉಪಕಥೆಗಳನ್ನು, ಧರ್ಮದ ನೀತಿ ಪ್ರಸಂಗಗಳನ್ನೂ ನಿಸ್ಸಂಕೋಚವಾಗಿ ಬಿಟ್ಟು ಬಿಟ್ಟಿದ್ದಾನೆ. ಇದಲ್ಲದೇ ಕುಮಾರವ್ಯಾಸನು ಮೂಲ ಮಹಾಭಾರತವನ್ನು ಸುಂದರವಾಗಿ ಸಂಗ್ರಹಿಸಿದ್ದಾನೆಯೆನ್ನುವಲ್ಲಿ ಹೆಮ್ಮೆಯ ಸಂಗತಿಯಾಗಿದೆ.

ಕುಮಾರವ್ಯಾಸನ ಭಾರತವು ಕೃಷ್ಣ ಕಥೆ ಎಂದು ಹೇಳಬಹುದು. ಶ್ರೀ ಕೃಷ್ಣಪರಮಾತ್ಮನ ಮಹಾತ್ಮೆಯನ್ನು ಇಲ್ಲಿ ಕವಿ ಹೊಗಳಿದ್ದಾನೆ. ಇದಲ್ಲದೇ ಸಂಧಿಯ ಕೊನೆಯಲ್ಲಿ ನಡುನಡುವೆ ಸಮಯ ದೊರೆತಾಗ ಅವನ ಮಹಿಮೆಯನ್ನು ಹಾಡಿಯೇ ಹಾಡುತ್ತಾನೆ. ಅಭಿಮನ್ಯುವಿನ ಮದುವೆಯ ಸಂದರ್ಭದಲ್ಲಿ ಶ್ರೀ ಕೃಷ್ಣಪರಮಾತ್ಮನ ಆಗಮನದ ಪ್ರಸಂಗ ದೊರೆಯುತ್ತಲೇ ಕವಿಯ ಸಂಯಮದ ಕಟ್ಟು ಒಡೆದು ಹೋಗಿ, ಅವನು ಕೃಷ್ಣಭಕ್ತಿಯ ಪ್ರವಾಹವನ್ನೇ ಹರಿಸಿದ್ದಾನೆ. ಇಂಥ ಕೃತಿಯನ್ನು ಕುಮಾರವ್ಯಾಸನು ರಚಿಸಿದ್ದಾನೆಂದೇ ಇಂದಿನ ಕನ್ನಡದ ರಾಷ್ಟ್ರಕವಿಗಳಾದ ಶ್ರೀ ಕೆ. ವಿ. ಪುಟ್ಟಪ್ಪನವರು ಕುಮಾರವ್ಯಾಸನನ್ನು ಕುರಿತು ಈ ರೀತಿಯಾಗಿ ಹಾಡಿದ್ದಾರೆನ್ನಬಹುದು.

"ಕುಮಾರವ್ಯಾಸ ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವದು !

ಭಾರತ ಕಣ್ಣಲಿ ಕುಣಿವುದು, ಮೈಯಲಿ
ಮಿಂಚಿನ ಹೊಳೆ ತುಳುಕಾಡುವದು !
ಕಲಿ ಕೆಚ್ಚಾಗುವದು
ಕವಿ ಹುಚ್ಚಾವಸು"

## ಸಂದರ್ಭದೊಡನೆ ಸ್ಪಷ್ಟೀಕರಣ.

೧) ಸೈರಂಧ್ರಿ ಕಾಮನ ಬಿಲ್ಲಿಹದ ಬಲುಗಾಯ ತಾಗಿತು ಬಲ್ಲೆ....... ನೀನವುಷಧಿ ಬದುಕಿಸಿಕೊಳ್ಳು.

ಕೀಚಕನು ಸೈರಂಧ್ರಿಯ ವೇಷದಲ್ಲಿರುವ ದ್ರೌಪದಿಯನ್ನು ಕಂಡು ಮೋಹಗೊಂಡು, ಮಾತನಾಡಿದ ನುಡಿಯಿದು.

ಕೀಚಕನು ಕುಬುದ್ಧಿಯವನು, ಆಗಿದ್ದನು. ಒಂದು ದಿನ ಅವನು ತನ್ನ ಅಕ್ಕನನ್ನು ನೋಡುವದರ ಸಲುವಾಗಿ ಅರಮನೆಗೆ ಬಂದಾಗ ಆ ಹೆಂಗಳೆಯರ ಮೇಳದಲ್ಲಿರುವ ಸೈರಂಧ್ರಿಯನ್ನು ಕಂಡು ಮೋಹಗೊಂಡು, ತನ್ನ ಅಕ್ಕನನ್ನು ಅಕ್ಕಾ ನಿನ್ನ ಓಲೆಕಾತಿಯನ್ನು ಮೀರಿಸುವ ಮನೋಹರಿ ಯಾರು ? ಎಂದು ಬಾಯ್ಬಿಟ್ಟು ಕೇಳಿದಾಗ ಅವಳು ಇವಳು 'ಗಂಧರ್ವರಮಣಿ ಕಾರಣಾಂತರ ದಿಂದ ನಮ್ಮನ್ನು ಆಶ್ರಯಿಸಿದ್ದಾಳೆ, ಈಕೆ ನಿನಗೆ ತಕ್ಕವಳಲ್ಲ,ಹೋಗು ಎಂದು ಸಮಾಧಾನ ಪಡಿಸಿ ಹೊರಗೆ ಕಳಿಸಿದಾಗ, ಅವನು ತಾತ್ಕಾಲಿಕವಾಗಿ ಸುಮ್ಮನೆ ಹೊರಟು ಹೋದರೂ ಅವನ ಮನಸ್ಸು ಸೈರಂಧ್ರಿಯಲ್ಲಿ ನಟ್ಟಿತ್ತು. ಮರುದಿನ ಬೆಳಗಾಗುತ್ತಲೇ ಅರಮನೆಯ ಬಾಗಲಿಗೆ ಧಾವಿಸಿ ಬಂದು ಬಾಗಿಲಿಗೆ ನಿಂತಿರುವ ಸೈರಂಧ್ರಿಯನ್ನು ಕುರಿತು 'ಸೈರಂಧ್ರಿ ಮನ್ಮಥ ನಿಂದಾದ ಗಾಯಗಳಿಗೆ ನೀನೇ ತಕ್ಕ ಮದ್ದನ್ನು ಬಲ್ಲೆ, ದಯವಿಟ್ಟು ನನ್ನನ್ನು ಬದುಕಿಸಿಕೋ' ಎಂದು ಕೀಚಕನು ಕೂಗಾಡಿದನು.

೨) ನಾಯಿ ಸಿಂಹಕ್ಕೆದಿರೆ? ಫಡ ಹೋಗೆಂದಳು.

ಕೀಚಕನ ಅವಾಚ್ಯ ನುಡಿಯನ್ನು ಕೇಳಿ ಬೇಸತ್ತು ದ್ರೌಪದಿಯು ನುಡಿದ ಮಾತಿದು.

ನೀನು ನಿನ್ನ ಚಳ್ಳಿಗಂಗಳನ್ನು ನನ್ನ ಮೇಲೆ ಚೆಲ್ಲಿ ಸಾಯುತ್ತಿರುವ ನನ್ನನ್ನು ಸಪ್ರಾಣವನ್ನಾಗಿ ಮಾಡು ಎಂಬ ಕೀಚಕನ ಲಜ್ಜಾಹೀನವಾದ ಮಾತುಗಳನ್ನು ಕೇಳಿ ಕೇಳಿ ಆಕೆಯ ಕೋಪವು ಕೆರಳಿತು. ಆಗ ಅವಳು

'ದುರಾತ್ಮಾ ನಿನ್ನ ವಂಶದ ಬೇರನ್ನೇ ಕೊಯ್ದುಕೊಳ್ಳುವ ಆ ಕಾರ್ಯಕ್ಕೆ ಏಕೆ ಪ್ರಯತ್ನಿಸುವೆ ? ಹೀಗೆ ಕೆಟ್ಟಮಾತನ್ನು ಆಡಿ ನನ್ನ ಪತಿಗಳಿಂದ ಮೃತ್ಯು ಮುಖನಾಗುವದನ್ನಾದರೂ ಗಮನಿಸಬೇಡವೇ ? ಎಂದಳು. ಆಗ ಕೀಚಕನಿಗೆ ಯಾರ ಭಯವು ಇರಲಿಲ್ಲ. "ಬಡವರ ಕೋಪ ದವಡೆಗೆ ಮೃತ್ಯು" ಎಂಬಂತೆ ನಿನ್ನ ಗಂಡಂದಿರ ಕೋಪ ಅವರ ಕೊಬ್ಬನ್ನು ಇಳಿಸೀತು. ಆ ವಿಚಾರ ಈಗ ಅಗತ್ಯವಿಲ್ಲ. 'ಕಾಮನ ಕೊರಲಗು ನನ್ನನ್ನು ಕೊಲ್ಲುತ್ತಿದೆ,; ನೀನು ನನ್ನನ್ನು ಒರಿಸಲೇಬೇಕು; ಸಾಯುವ ಮುನ್ನ ನಿನ್ನಲ್ಲಿ ನೆರದೇ ಸಾಯುವೆನು; ಇದು ನಿಶ್ಚಯ; ಆದರೆ ನೀನಾಗಿಯೇ ಕೃಪೆಮಾಡಿ ನನ್ನ ಜೀವವನ್ನು ಉಳಿಸಿ ದರೆ ಉಭಯರಿಗೂ ಕ್ಷೇಮ.' ಎಂದು ಅವಾಚ್ಯ ನುಡಿಗಳಿಂದ ಕೀಚಕನು ನುಡಿಯಲಾಗಿ, ಅದರಿಂದ ಅಸಹ್ಯಗೊಂಡು ದ್ರೌಪದಿಯು ಎಲವೋ, ನಾಯಿ ಸಿಂಹವನ್ನು ಬಯಸುವದುಂಟೆ ? ಛೀ, ಮೂರ್ಖ ಹೋಗುತ್ತ ಎಂದು ಹೇಳಿ ದ್ರೌಪದಿ ಅರಮನೆಗೆ ಹೊರಟು ಹೋದಳು.

೩) 'ಭೀಮ ಕೊಟ್ಟೈ ತನಗೆ ಸಾವಿನ ನೇಮವನು ನಿಮ್ಮಣ್ಣನಾಜ್ಞೆ ವಿರಾಮವಾಗದೆ ನಡೆಯಿ ಧರ್ಮದ ವೈಸಿರಿಯನರಿಸು ಕಾಮಿನಿಯ ಕೇಳಿಯಲಿ ನೆನೆವುದು ತಾಮಸದಿ ತಾ ಮೀರಿ ನಡೆದುದ್ದಾಮತೆಯ ಸೈರಿಸುವು ದೆಂದಳು.

ಕೀಚಕನಿಂದಾದ ಅಪಮಾನ ಸಹಿಸಿಕೊಂಡು ಕೊನೆಗೆ ಭೀಮಸೇನನೇ ಶರಣ್ಯನೆಂದು ತಿಳಿದು ದ್ರೌಪದಿ ಪಾಕಶಾಲೆಗೆ ಹೋಗಿ ತನಗೆ ರಾಜಸಭೆ ಯಲ್ಲಾದ ಅಪಮಾನವನ್ನು ತೋಡಿಕೊಂಡಾಗ ಅದಕ್ಕೆ ಭೀಮನ ಕಟುವಾದ ನುಡಿಯನ್ನು ಕೇಳಿ ದ್ರೌಪದಿಯ ದುಃಖ ಒತ್ತರಿಸಿ ಬಂದು ನುಡಿದ ಮಾತಿದು.

ಭೀಮಸೇನನು 'ದ್ರೌಪದಿ, ನಿನಗೆ ನಾನೊಬ್ಬನೇ ಗಂಡನಲ್ಲಾ ಇನ್ನೂ ನಾಲ್ವರಿದ್ದಾರೆ. ಅವರಲ್ಲಿ ಅಳು ಹೋಗು, ಧರ್ಮರಾಯ ನನಗೆ ಸ್ವಲ್ಪೂ ಅವಕಾಶ ಕೊಡುವವನಲ್ಲ. ನಾನು ಅಣ್ಣನ ಆಜ್ಞೆಯಲ್ಲಿ ಸಿಕ್ಕಾಬಿದ್ದಿದ್ದೇನೆ. ಇನ್ನು ಅವರು ನಾಲ್ಕೇ ಜನ ಗಂಡಂದಿರೆಂದು ತಿಳಿದುಕೋ ಎಂದಾಗ ದ್ರೌಪ ದಿಗೆ ದುಃಖ ಒತ್ತರಿಸಿ ಬಂದಿತು. ಆವಳು ಬೆಂಕಿ ತಗಲಿದ ಬಾಳೆಹಣ್ಣಿನಂತೆ ಕಣ್ಣೀರಿನಲ್ಲಿ ತೊಯ್ದು ಹೋದಳು. ತಾನು ಪಾಂಚಾಲರಾಜನ ಮಗಳಾಗಿ ಹುಟ್ಟಿ ಶೂರರಾದ ಪಾಂಡು ಪುತ್ರರನ್ನು ಕೈಹಿಡಿದು, ವಿರಾಟರಾಯನ

ಹೆಂಗಸರಿಗೆ ತುರುಬುಕಟ್ಟುವ ಸೇವಾವೃತ್ತಿ ತನಗೆ ಬಂದಿತು. ಐದು ಜನ ಕೂಡಿ ಒಬ್ಬಳನ್ನು ಆಳಲಾರದೇ ಆಳುತ್ತಿದ್ದಾರೆ, ಐಶ್ವರ್ಯವೆಲ್ಲವನ್ನು ಕೌರವನಿಗೆ ವಹಿಸಿಕೊಟ್ಟರು, ಇಂದು ತನ್ನನ್ನು ಕೀಚಕನಿಗೆ ವಹಿಸಿಕೊಡುತ್ತಿದ್ದಾರೆ. ಎಂದು ದ್ರೌಪದಿಯು ಭೀಮನಲ್ಲಿ ಪರಿಪರಿಯಾಗಿ ಹಲುಬಿ ಕೊನೆಗೆ ಬಲಭೀಮನೆ, ನನಗೆ ಸಾಯಲು ಅಪ್ಪಣೆ ಕೊಟ್ಟೆಯಷ್ಟೇ, ಆಯಿತು ಅಣ್ಣನ ಆಜ್ಞೆಗೆ ಆತಂಕತರಬೇಡ ನಾನು ಕಟುವಾಗಿ ನುಡಿದುದಕ್ಕೆ ಕ್ಷಮಿಸಬೇಕು. ಎಂದು ಭೀಮನ ಪಾದಗಳಿಗೆ ದ್ರೌಪದಿಯು ಎರಗಿದಳು.

ಳ) ಪರಸತಿಗಳುಪಿದಾತಂಗೆ ಮೃತವಿಷ ಕೋಮಲತೆ ಕರ್ಕಶವೆನು
ತಲವೆ ತುಡುಕಿದನು ಮುಂದಲೆಯ.

ಕೀಚಕನು ಸಂಜೆಯಾಗುತ್ತಲೇ ಅತ್ಯಂತ ಸಂಭ್ರಮದಿಂದ ನಾಟ್ಯಗೃಹವನ್ನು ಪ್ರವೇಶಿಸಿ, ಸೈರಂಧ್ರಿವೇಷದಲ್ಲಿ ಮಲಗಿದ್ದ ಭೀಮಸೇನನು ಮುಟ್ಟಿದಾಗ ಅವನ ದೇಹವುಕರ್ಕಶವೆನಿಸಿ, ಅವನು ಕೇಳಿದಾಗ ಭೀಮಸೇನನು ನುಡಿದ ಮಾತಿದು.

ದ್ರೌಪದಿಯ ಹೇಳಿಕೆಯಂತೆ ಕೀಚಕನು ಸಂಜೆಯ ವೇಳೆಗೆ ಅತ್ಯಂತ ಸಂಭ್ರಮದಿಂದ ನಾಟ್ಯಗೃಹವನ್ನು ಸೇರಿ, ತಡವರಿಸುತ್ತಾ ಮಂಚದ ಬಳಿಗೆ ಹೋದನು. ಅಲ್ಲಿ ಮಲಗಿದ್ದ ವ್ಯಕ್ತಿ ಸೈರಂಧ್ರಿಯಂದೇ ಭ್ರಮಿಸಿದ್ದ ಕಾಮಿಯು ಎಲೈ ಸೈರಂಧ್ರಿ, ಇಗೋ ಪುಷ್ಪತಾಂಬೂಲಗಳನ್ನು ತೆಗೆದುಕೋ, ಎಂದು ಆತ್ಮೀಯವಾದ ಮಾತುಗಳನ್ನು ಆಡುತ್ತ, ಮಲಗಿದ್ದ ಭೀಮಸೇನನ ಮೈಯನ್ನು ಕೇವಲ ಲಂಪಟದಿಂದ ಸವರಿದನು. 'ಇದೇನು ಸೈರಂಧ್ರಿ ನೀನೇನು ಮಾಯಾವೇಷವನ್ನು ಧರಿಸಿರುವೆಯಾ? ನಿನ್ನ ದೇಹ ಎಷ್ಟು ಕರ್ಕಶವಾಗಿದೆಯಲ್ಲಾ?' ಎಂದನು. ಅವನ ಬಾಯಿಂದ ಈ ಮಾತು ಹೊರಡುತ್ತಿದ್ದಂತೆಯೇ ಮಾರುತಿಯು ಮೇಲಕೆದ್ದು 'ಪರಸತಿಗೆಕಣ್ಣು ಹಾಕಿದವರಿಗೆಲ್ಲಾ ಹಾಗೆಯೇ ಆಗುವದು. ಅಮೃತವಿಷವಾಗುವದು, ಕೋಮಲವು ಕಠಿಣವಾಗುತ್ತದೆ' ಎನ್ನುತ್ತ ಮುಂದಲೆಯನ್ನು ಹಿಡಿದು ಜಗ್ಗಿದನು.

ಱ) ಬಲನಾಯಕವಾಯ್ತು ಮತ್ಸ್ಯನ ಕುಲಕೆ ಬಂದುದು ಕೇಡು
ಸುಮ್ಮನೆ ನಿಲುವುದನುಚಿತ ಭೀಮ ಬಿಡಸು ವಿರಾಟ ಭೂಪತಿಯು.

ಸುಶರ್ಮನ ಬಾಣಾಘಾತದಿಂದ ವಿರಾಟರಾಯನು ಬಸವಳಿದು ಶತ್ರುವಿನ ಸೆರೆಯಾದಾಗ ಧರ್ಮರಾಯನು ಭೀಮನನ್ನು ಕುರಿತು ನುಡಿದ ಮಾತಿದು.

ಕೌರವರ ಸೈನ್ಯವು ವಿರಾಟ ನಗರವನ್ನು ಮುತ್ತಲು ಹೊರಟಾಗ, ವಿರಾಟರಾಜನು ಪುರರಕ್ಷಣೆಗಾಗಿ ರಾಜಕುಮಾರನಾದ ಉತ್ತರನನ್ನು ನೇಮಿಸಿ, ಆತನು ಸೈನ್ಯದೊಡನೆ ಸುಶರ್ಮನಿಗೆ ಇದಿರಾಗಿ ನಡೆದನು. ಆದರೂ ತುರು ಹುಯ್ಯಲು ಕೇಳಿ ಧರ್ಮರಾಯನು ಜಲಪ್ರಾಶನ ಮಾಡುವಂತಿರಲಿಲ್ಲ, ಇದರ ಮೇಲೆ ಅವರ ಅಜ್ಞಾತವಾಸದ ಅವಧಿ ಮುಗಿದುಹೋಗಿತ್ತು; ಆದ್ದರಿಂದ ಅರ್ಜುನನ ಹೊರತು ಉಳಿದ ನಾಲ್ಕು ಪಾಂಡವರು ಸೈನ್ಯದೊಡನೆ ಯುದ್ಧಕ್ಕೆ ಹೊರಟರು ಅಗತ್ಯ ಬಿದ್ದರೆ ಅರ್ಜುನನೂ ಯುದ್ಧಕ್ಕೆ ಹೊರಡಬೇಕೆಂದು ತಿರ್ಮಾನಿಸಿಕೊಂಡರು. ವಿರಾಟನ ಸೇನೆಗೂ ಮತ್ತು ಕುರು ಸೇನೆಗೂ ಕೈಗೆ ಕೈಹತ್ತಿತು. ಯುದ್ಧದಲ್ಲಿ ಸುಶರ್ಮನ ಬಾಣಾಘಾತದಿಂದ ವಿರಾಟರಾಯನು ಶತ್ರುವಿನ ಸೆರೆಯಾದನು. ಆತನ ಸೋದರರು ದಿಕ್ಕು ಕಾಣದಂತಾದರು. ಆಗ ಧರ್ಮರಾಯನು ಭೀಮನನ್ನು ಕುರಿತು ಅಯ್ಯಾ, ವಿರಾಟ ಸೇನೆ ಅನಾಯಕವಾಗುತ್ತದೆ; ಅವನ ಕುಲಕ್ಕೆ ಕೇಡು ಬಂದಂತಾಗುತ್ತದೆ; ಇನ್ನು ಸುಮ್ಮನಿರುವದು ಉಚಿತವಲ್ಲ; ಮೊದಲು ವಿರಾಟನನ್ನು ಬಂಧಮುಕ್ತನನ್ನಾಗಿ ಮಾಡು ಎಂದನು.

(೬) ಆರೊಡನೆ ಕಾದುವೆನು ಕೆಲಬರು ಹಾರವರು ಕೆಲವರಂತಕನ
ನೆರೆಯೂರವರು ಕೆಲವರು ಅಧಮ ಕುಲದಲ್ಲಿ ಸಂದು ಬಂದವರು.

ಚಾರರು ಬಂದು 'ಸ್ವಾಮಿ ಕುರುಸೇನೆ ತುರುಗಳನ್ನು ಹಿಡಿದಿದ್ದಾರೆ ಎಂದು ಹೇಳಿದಾಗ ಉತ್ತರನು ಹೆಂಗಳೆಯದುರಿನಲ್ಲಿ ಅತಿ ಪೌರುಷದಿಂದ ನುಡಿದ ಮಾತಿದು.

ಕೌರವರ ಸೈನ್ಯ ವಿರಾಟರಾಯನ ತುರುಗಳನ್ನು ಹಿಡಿದಾಗ ಚಾರರು ಬಂದು ಉತ್ತರಕುಮಾರನೆದುರಿಗೆ ತುರುಗಳ ವಿಷಯವೆಲ್ಲವನ್ನು ವಿವರಿಸಲಾಗಿ ಆತನು ಹೆಂಗಳೆಯರ ಎದುರಿನಲ್ಲಿ ವೀರಾವೇಶ ಬಂದಂತಾವನಾಗಿ "ಯುದ್ಧವೆಂದು ಬಡಬಡಿಸುತ್ತಿರುವ ಆ ಕುನ್ನಿಗಳನ್ನು ಅತ್ತನೂಕೋ, ಆ ಕೌರವ ಕುನ್ನಿಗಳು ನನಗೆ ಲೆಕ್ಕವೇ ?" ಎಂದು ಶೂರನಂತೆ ಪೌರುಷದ ಮಾತುಗಳನ್ನು ಆಡುತ್ತಿದ್ದನು. ಇದಲ್ಲದೇ ಕೌರವನ ಸೈನ್ಯದಲ್ಲಿ ತನಗೆ

ಸಮಾನರಾದವರು ಇಲ್ಲವೆಂಬುದು ಅವನ ಭಾವನೆ, ಯಾರೊಡನೆ ಯುದ್ಧ ಮಾಡಲಿ ? ಕೆಲವರು ಬ್ರಾಹ್ಮಣರು, ಕೆಲವರು ಯಮನ ನೆರೆ ಹೊರೆಯವರು ಮತ್ತೆ ಕೆಲವರು ಅಧಮ ಕುಲದಲ್ಲಿ ಹುಟ್ಟಿದವರು ಎಂಬುದೇ ಅವನ ಅಭಿಪ್ರಾಯವಾಗಿತ್ತು.

೭) ಜವನ ಮೀಸೆಯ ಮುರಿದನೋ ಭೈರವನ ದಾಡೆ ಅಲುಗಿದನೋ, ಮೃತ್ಯುವಿನ ಮೇಬುಡ ಸೆಳೆದನೋ, ಕೆಸರಿಯ ಕೆಣಕಿದನೋ,

ಕೌರವನು ಉತ್ತರ ದಿಕ್ಕಿನಿಂದ ಬಂದು ಗೋವುಗಳನ್ನು ಸೆರೆಹಿಡಿದಾಗ ಗೋಪಾಲಕರು ಬಂದು ವಿಷಯವನ್ನು ಉತ್ತರನಿಗೆ ತಿಳಿಸಿದಾಗ ಉತ್ತರನು ಪೌರುಷದಿಂದ ನುಡಿದ ಮಾತಿದು.

ಕೌರವನು ಸೈನ್ಯವನ್ನು ತೆಗೆದುಕೊಂಡು ಉತ್ತರದಿಕ್ಕಿನಲ್ಲಿ ತುರುಗಳನ್ನು ಸೆರೆಹಿಡಿದಕೂಡಲೇ ಗೋಪಾಲಕರು ಬಂದು ಆ ವಿಚಾರವನ್ನು ಹೇಳಿದಾಗ ಅವನು ವೀರಾವೇಶ ಬಂದಂತವನಾಗಿ ಹೆಂಗಳೆಯರೆದುರಿಗೆ ಆ ಕುನ್ನಿಗಳನ್ನು ಅತ್ತನೂಕೋ, ನಾನು ಯುದ್ಧಕ್ಕೆ ನಿಂತರೆ ದೇವತೆಗಳು ನಡುಗಿ ಹೋಗುತ್ತಾರೆ. ಎಂದು ಪೌರುಷದ ಮಾತುಗಳನ್ನು ಆಡುತ್ತ, ಮೀಸೆಯನ್ನು ಹುರಿಮಾಡುತ್ತ ಸುತ್ತಲು ಕುಳುತ ಹೆಂಗಳೆಯರನ್ನು ನೋಡಿದನು. ಇದಲ್ಲದೇ ಅವನು ತನ್ನ ಪೌರುಷವನ್ನು ಹೇಳುತ್ತ ನನಗೆ ಕೋಪ ಬಂದರೆ ಅವನ ಕೀರ್ತಿ ಅಳಿಸಿ ಬಿಡುವೆನೆಂದು ಅವನಿಗೆ ಗೊತ್ತಿಲ್ಲ. ಯಮನ ಮೀಸೆಯನು ಎಳೆದು ತಮಾಷೆ ಮಾಡಲು ಹೊರಟಿರುವನೇನೊ ? ಮೃತ್ಯುವಿನ ಮೇಲಿನ ಬಟ್ಟೆಯನ್ನೆಳೆದು ಕೆರಳಿಸುವಂತೆ ನನ್ನ ಮೇಲೆ ಬಂದಿದ್ದಾನೆ ಎಂದನು.

೮) ಆನಿರಲು ಭೀಷ್ಮಾದಿಗಳು ನಿನಗೇನು ಮಾಡಲು ಬಲ್ಲರಳುಕದೆ ನೀನು ನಿಲುಸಾಕೊಂದು ನಿಮಿಷಕೆ ಗೆಲುವೆನಸಿಬರನು.'

ಬೃಹನ್ನಳೆಯ ವೇಷದಲ್ಲಿರುವ ಅರ್ಜುನನು ಉತ್ತರಕುಮಾರನ ಸಾರಥಿಯಾಗಲು ಒಪ್ಪಿ, ಉತ್ತರನ ಎದುರಿಗೆ ಭೀಷ್ಮಾದಿಗಳನ್ನು ನೆನೆದು ತನ್ನ ಹೆದರಿಕೆಯನ್ನು ಸೂಚಿಸಿದಾಗ ಉತ್ತರಕುಮಾರನು ನುಡಿದ ಮಾತಿದು.

ಉತ್ತರಕುಮಾರನು ತನ್ನ ಪೌರುಷವನ್ನು ಹೇಳುತ್ತ "ಅನ್ಯಾಯವಾಗಿ ನನಗೆ ಸಾರಥಿಯಾಗಬಲ್ಲವನು ನಿನ್ನಿನ ಯುದ್ಧದಲ್ಲಿ ಸತ್ತುಹೋದನು. ನನ್ನ ಮನಸ್ಸಿಗೆ ಹೊಂದಿಕೊಳ್ಳುವಂತಹ ಸಾರಥಿಯೊಬ್ಬನು ದೊರೆತರೆ ಕೌರವನ

ಸೈನ್ಯಕ್ಕೆಲ್ಲಾ ಹಬ್ಬಮಾಡುತ್ತೇನೆ" ಎಂದು ತಡೆಯಿಲ್ಲದ ಪೌರುಷದ ಮಾತು ಗಳನ್ನು ಕೇಳಿ ಅರ್ಜುನನು ರೇಗಿದನು. ಆಗ ಅವನು ದ್ರೌಪದಿಯನ್ನು ಏಕಾಂತದಲ್ಲಿ ಕರೆದು ತಾನು ಅರ್ಜುನನ ಸಾರಥಿಯೆಂದು ಉತ್ತರೆಗೆ ಸೂಚಿಸು ಎಂದು ಹೇಳಿದನು. ಅದರಂತೆ ಆಕೆಯು ಉತ್ತರೆಯ ಬಳಿಗೆ ಬಂದು ಅಮ್ಮ, ಹಿಂದೆ ಖಾಂಡವ ದಹನ ಕಾಲದಲ್ಲಿ ಬೃಹನ್ನಳೆ ಅರ್ಜುನನ ಸಾರಥಿಯಾಗಿದ್ದ ಬೇಕಾದರೆ ಈಗ ರಾಜಕುಮಾರನಿಗೆ ಸಾರಥಿಯಾಗಬಲ್ಲ. ಎಂದು ಹೇಳಿದಾಗ ಉತ್ತರೆಗೆ ಅದನ್ನು ಕೇಳಿ ಸಂತೋಷವಾಗಿ ತನ್ನ ಅಣ್ಣನಿಗೆ ಸೂಚಿಸಿದಾಗ ಅದರಿಂದ ಅವನಿಗೂ ಸಹ ಸಂತೋಷವಾಯಿತು ಉತ್ತರೆಯೇ ಸ್ವತಃ ಹೋಗಿ ಅರ್ಜುನನನ್ನು ಒಪ್ಪಿಸಿ ಕರೆದುಕೊಂಡು ಬಂದಾಗ ಉತ್ತರನು ಅವನನ್ನು ಸ್ವಾಗತಿಸಿ, ಹೊಗಳಿದನು. ಭೀಷ್ಮಾದಿಗಳೊಡನೆ ಸಮರವೆಂದರೆ ಸಾಮಾನ್ಯವಾದುದಲ್ಲವೆಂದು ಅರ್ಜುನನು ಸೂಚಿಸಿದಾಗ ಆಗ ಉತ್ತರ ಕುಮಾರನು ಅಯ್ಯಾ' ನಾನಿರುವಾಗ ಭೀಷ್ಮಾದಿಗಳು ನಿನ್ನನ್ನು ಏನು ಮಾಡ ಬಲ್ಲರು ? ನೀನು ಸ್ವಲ್ಪೂ ಹೆದರಬೇಡ, ನಾನು ಅವರನ್ನು ಕ್ಷಣಮಾತ್ರದಲ್ಲಿ ಸಂಹರಿಸುತ್ತೇನೆ ಎಂದು ಪೌರುಷದಿಂದ ನುಡಿದನು.

೯) "ನೆಲು ಹೋದೆಯಾದರೆ ಕಿತ್ತು ಬಿಸುಡುವೆ ನಿನ್ನ ಶಿರವನು"

ಉತ್ತರಕುಮಾರನ ರಥವು ರಣರಂಗವನ್ನು ಪ್ರವೇಶಿಸುತ್ತಿದ್ದಂತೆಯೇ ಅವನು ಅಂಜಿ ರಥದಿಂದ ಇಳಿದು ಹಿಂದಕ್ಕೆ ಓಡಲು ಮೊದಲು ಮಾಡಿದಾಗ ಅರ್ಜುನನು ಉತ್ತರನನ್ನು ಕುರಿತು ನುಡಿದ ಮಾತಿದು.

ಅರ್ಜುನನು ರಥವನ್ನು ರಣರಂಗಕ್ಕೆ ಒಯ್ಯುತ್ತಿದ್ದಂತೆಯೇ ಉತ್ತರ ಕುಮಾರನ ದೇಹವು ನಡುಗಲಾರಂಬಿಸಿತು. ರಣರಂಗದಲ್ಲಿರುವ ಭಯಂಕರ ವಾದ ದೃಶ್ಯವನ್ನು ನೋಡಿ ತನ್ನ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು 'ಅಯ್ಯಾ ಸಾರಥಿ ನಿನ್ನ ರಥವನ್ನು ಮುಂದಕ್ಕೆ ಓಡಿಸಿ ನನ್ನ ಕುತ್ತಿಗೆ ಯನ್ನೇಕೆ ಕೊಯ್ಯುತ್ತಿ ? ನಿನಗೆ ಸ್ವಲ್ಪವೂ ವಿವೇಕವಿದ್ದಂತೆ ಕಾಣುವದಿಲ್ಲ ವೆಂದು ಉತ್ತರನು ನುಡಿದರೂ ಅರ್ಜುನನು ಅದಕ್ಕೆ ಲಕ್ಷ್ಯಕೊಡದೇ ರಥ ವನ್ನು ಮುಂದುವರಿಸುತ್ತಲೇ ಇದ್ದನು. ಆಗ ಉತ್ತರಕುಮಾರನು ಗತ್ಯಂತರ ವಿಲ್ಲದೇ 'ಈ ಪಾಪಿ ಅನ್ಯಾಯವಾಗಿ ನನ್ನನ್ನು ಕೊಂದ' ಎನ್ನುತ್ತ ರಥದಿಂದ ಇಳಿದು ಓಡಲು ಪ್ರಾರಂಭಮಾಡಿದಾಗ, ಅರ್ಜುನನು ಅವನನ್ನು ಕಂಡು ರಥವನ್ನು ನಿಲ್ಲಿಸಿ ಎಲವೋ ನೀನು ಹೆಜ್ಜೆಯನ್ನು ಮುಂದೆ ಇಟ್ಟ

ಯಾದರೆ ನಿನ್ನ ಶಿರವನ್ನು ಕಿತ್ತಿ ಹಾಕುತ್ತೇನೆ ಎಂದು ಅಬ್ಬರಿಸಿ ಅವನನ್ನು ಬೆಂಬತ್ತಿದನು.

೧೦) ನಾಡನರಿಯವ್ರೋಲೆನಗೆ ನೀನು ಹಲುಗಿರಿಯೇ ಬಿಡುವೆನೆ ಕಾದು ನಡೆಯೆಂದ.

ಉತ್ತರಕುಮಾರನು ಯುದ್ಧವನ್ನು ಕಂಡು ಹೆದರಿ ನಡುಗಿ, ಅರ್ಜುನನ ಕಾಲಿಗೆ ಬಿದ್ದು ಬೇಡಿಕೊಂಡಾಗ ಅರ್ಜುನನು ಉತ್ತರನನ್ನು ಕುರಿತು ನುಡಿದ ಮಾತಿದು.

ಅರ್ಜುನನು ರಥವನ್ನು ರಣರಂಗದ ಕಡೆಗೆ ಒಯ್ಯುತ್ತಿದ್ದಾಗ ಉತ್ತರ ಕುಮಾರನು ಗದಗದ ನಡುಗಿ ಹೋದನು. ಆಗ ಅವನು ಗತ್ಯಂತರವಿಲ್ಲದೇ ರಥದಿಂದ ಧುಮುಕಿ ಹೋದಾಗ ಅರ್ಜುನನು ಅವನನ್ನು ತಡೆದು ನಿಲ್ಲಿಸಿ, 'ಎಲವೋ ಹೆಂಗಸರ ಇದುರಿನಲ್ಲಿ ಅಷ್ಟು ಜೋರಾಗಿ ಹುಬ್ಬುಗುಟ್ಟದೆ! ಈಗ ಕ್ಷತ್ರಿಯ ವಂಶಕ್ಕೆಲ್ಲಾ ಅಪಮಾನವಾಗುವಂತೆ ಓಡಿ ಹೋಗುವೆಯಾ' ಎಂದು ಎಳೆದು ತಂದಾಗ ಉತ್ತರನು ಅವನ ಕಾಲನ್ನು ಬಿದ್ದು "ಅಯ್ಯಾ ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟಬಂಡವನೆಂದು ಭಾವಿಸು ನನ್ನ ದಮ್ಮಯ್ಯ, ನನ್ನನ್ನು ಕೈಬಿಡು" ಎಂದು ದೈನ್ಯನಿಂದ ಅಂಗಲಾಚಿದನು. ಆಗ ಅರ್ಜುನನಿಗೆ ಇದರಿಂದ ನಗುಬಂದು ನಾಡನರಿಯಂತೆ ಹಲ್ಲು ಗಿರಿದ ಮಾತ್ರಕ್ಕೆ ನಿನ್ನನ್ನು ನಾನು ಬಿಡುವದಿಲ್ಲ ಯುದ್ಧಕ್ಕೆ ನಡೆ ಎಂದನು.

೧೧) ಈ ಸಮಂಜಸ ದಿವಸದಲಿ ಸಿಂಹಾಸನದಲಭಿಷೇಕವನು ಭೂಮೀಶ ವಿಸ್ತರಿಸುವೆನು.

ಉತ್ತರಕುಮಾರನಿಂದ ವಿರಾಟರಾಯನಿಗೆ ಪಂಚಪಾಂಡವರ ಪರಿಚಯ ವಾದಾಗ ವಿರಾಟರಾಯನು ನಮಸ್ಕರಿಸಿ ಧರ್ಮರಾಜನನ್ನು ಕುರಿತು ನುಡಿದ ಮಾತಿದು.

ಉತ್ತರಕುಮಾರನು ಪಂಚಪಾಂಡವರ ಪರಿಚಯವನ್ನು ಮಾಡಿ ಕೊಟ್ಟ ಮೇಲೆ ವಿರಾಟನು ಭಯದಿಂದ ನಡುಗುತ್ತ ರತ್ನಖಚಿತವಾದ ದಿವ್ಯಾಭರಣಗಳನ್ನು ಅರ್ಪಿಸಿದನು. 'ಮಹಾರಾಜ, ನನ್ನ ಸರ್ವಾಪರಾಧಗಳನ್ನು ಮನ್ನಿಸಿ ನನ್ನನ್ನು ಉದ್ಧರಿಸು' ಎಂದು ಧರ್ಮರಾಜನನ್ನು ಬೇಡಿಕೊಂಡನು. ಅದೇ ವೇಳೆಗೆ ಸುದೀಷ್ಣಾದೇವಿಯು ತನ್ನ ಮಗಳ ಪರಿವಾರದೊಡನೆ ಅಲ್ಲಿ ಬಂದು ದ್ರೌಪದಿಗೆ ಕಾಣಿಕೆಯನ್ನು ಅರ್ಪಿಸಿದಳು. ಆಗ ವಿರಾಟ ರಾಯನು ಅಂದೇ ಧರ್ಮರಾಜನನ್ನು ತನ್ನ ರಾಜ್ಯಕ್ಕೆ ಅಧಿಪತಿಯಾಗಿ ಪಟ್ಟಾಭಿಷೇಕ ಮಾಡುವೆನೆಂದು ಹೇಳಿದನು.

